

## ಈ ಸಂಚಿಕೆಯಲ್ಲಿ



ಇವಲ್ಲದೆ ಚುಟಕ, ಅಪ್ಪಚ್ಚಿ, ಚಿತ್ರ, ಇತ್ಯಾದಿಗಳನೇಕ.

# ಚಂದಮಾಮ



ವಾರ್ಷಿಕ ಚಂದಾ

ರೂ. ೪ – ೮ – ೦

ಎರಡು ವರ್ಷ ಚಂದಾ

ರೂ. ೮ – ೦ – ೦



**CHANDAMAMA OFFICE**

2 & 3 Arcot Road,
Kodambakkam :: Madras-24

# ಚಂದಮಾಮ

## ಹೊಸ ವರ್ಷದ ಶುಭ ಸಮಾಚಾರ



ತಾರೀಖು 1-ನೇ ಜನವರಿ 1952 ರಿಂದ ಚಂದಮಾಮ ಕಾರ್ಯಾಲಯವು ತನ್ನ ಸ್ವಂತವಾದ ನೂತನ ಕಟ್ಟಡಕ್ಕೆ ವರ್ಗಾಯಿಸಲ್ಪಟ್ಟಿರುವುದರಿಂದ ಮುಂದಿನ ಸಂಚಿಕೆಗಳೆಲ್ಲವೂ ಸ್ವಂತ ಕಟ್ಟಡದಲ್ಲಿ ಪೂರ್ಣ ತಯಾರಾಗಿ ಓದುಗರ ಕೈಸೇರುತ್ತವೆ.

ಇದುವರೆಗಿನ ಓದುಗರ, ಲೇಖಕರ, ಏಜೆಂಟರುಗಳ ಸಹಕಾರಕ್ಕೆ ಕೃತಜ್ಞತೆಯಿಂದ ಅಭಿನಂದಿಸಿ, ಸರ್ವರಿಗೂ ಈ ಸಂತೋಷ ಸಂದರ್ಭದಲ್ಲಿ ಹೊಸ ವರ್ಷದ ಶುಭಾಶಯುಗಳನ್ನು ಚಂದಮಾಮ ಅರ್ಪಿಸುತ್ತಾನೆ. ಮುಂದೆಯೂ ಇದೇ ರೀತಿ ಸಂಪೂರ್ಣ ಸಹಕಾರ ಲಭಿಸಲೆಂದು ಹಾರೈಸುತ್ತಾನೆ.

ಲೇಖಕರೂ, ಓದುಗರೂ, ಏಜೆಂಟರೂ ಸರ್ವರೂ ಚಂದಮಾಮನ ಈ ಸ್ಥಳ ಬದಲಾವಣೆಯನ್ನು ಗಮನಿಸಿ, ತಮ್ಮ ಲೇಖನ, ಪತ್ರ, ಮನಿಯಾರ್ಡರು ಇತ್ಯಾದಿ ವ್ಯವಹಾರಗಳೆಲ್ಲವನ್ನು ಕೆಳಗೆ ಕೊಟ್ಟಿರುವ ನೂತನ ವಿಳಾಸದೊಡನೆ ಮಾಡಬೇಕಾಗಿ ಸವಿನಯ ಪ್ರಾರ್ಥನೆ.

---

ಹೊಸ ವಿಳಾಸ:

CHANDAMAMA PUBLICATIONS
. . . 2 & 3 ARCOT ROAD . . .
**Kodambakkam :: Madras-24**

ಚಂದಮಾಮ
ಮಕ್ಕಳ ಕಥೆಯ ಮಾಸಪತ್ರಿಕೆ



ಸಂಪುಟ ೮ : ಸಂಚಿಕೆ ೧

ಜನವರಿ ೧೯೫೨

## ಮಾತಿಗೆ ಓಗೊಡಿ

ಜಿಗಿಯುತ ಜಿಗಿಯುತ ಭರದಲಿ ಬನ್ನಿರಿ
ಕನ್ನಡ ನಾಡಿನ ಚಿಣ್ಣರಿರಾ
ನೀವೇ ನಾಡಿನ ಮುಂದಿನ ವೀರರು
ಬಾಳಿದು ಬೆಳಗಲಿ ಮಕ್ಕಳಿರಾ

ನಾಡಿನ ದುರ್ದೆಶೆ ನೀಗಲು ಹೆಣಗುವ
ಪಣ ತೊಟ್ಟೇಳಿರಿ ಚಿಣ್ಣರಿರಾ
ಮಾತೆಯು ಕೊರಗನು ಕೇಳಿರಿ! ಏಳಿರಿ!
ಎಚ್ಚರ ಗೊಳ್ಳಿರಿ! ಶೂರರಿರಾ

ಧರ್ಮದ ಹೆಸರಲಿ ನಡೆಯುವ ಕೆಡುಕನು
ತಡೆಯಲು ಬನ್ನಿರಿ ಚಿಣ್ಣರಿರಾ
ಜಾತಿಯ ಮತಗಳ ಭೇದವನುಳಿಯುತ
ಒಮ್ಮನದಿಂದಿರಿ ಕಂದರಿರಾ.

ನಾಡಿನ ಮಮತೆಯ ಕಾರ್ಯದೆ ತೋರಿರಿ
ಬೇಗನೆ ಬನ್ನಿರಿ ಚಿಣ್ಣರಿರಾ
"ಮಾಡುವ ಇಲ್ಲವೆ ಮಡಿಯುವ" ಯೆನ್ನುವ
ಮಾತಿಗೆ ಓಗೊಡಿ ಧೀರರಿರಾ

ಪ. ಸೀತಾರಾಮ ಭಟ್ಟ, ಮೂಡಬಿದ್ರಿ.







# ಅಂದಗಾರ ಸೋಮು

ಒಂದು ಸಾರಿ ನಾಡಿಗೆಲ್ಲ
ದೊಡ್ಡ ಹಬ್ಬ ಬಂದಿತು
ಭಾಗ್ಯವಂತ ಜನರಿಗೆಲ್ಲ
ಹರುಷವನ್ನು ತಂದಿತು

ಸೋಮನೊಬ್ಬ ಭಾಗ್ಯಶಾಲಿ
'ಕಮ್ಮಿ' ಎಂಬುದಿಲ್ಲವು
ಅಂದಗಾರ ಪುಟ್ಟನವನು
'ಕಷ್ಟ' ವೆಂಬುದಿಲ್ಲವು

ಮಾಸಲರಿವೆ ಮೂಲೆಗೆಸೆದು
ಹಳೆಯ ಕೊಳೆಯ ಕಳೆದನು
ಹೊಟ್ಟೆತುಂಬ ತಿನಸು ತಿಂದು
ಹೊಸತು ಬಟ್ಟೆ ಪಡೆದನು

ಹೊಳೆವ ಮಿರುಗು ಸಿಲ್ಕು ಷರಟು
ನೀಲಿ ಚಡ್ಡಿ ಧರಿಸಿದ
ತನ್ನ ಜಂಭ ಮುಂದಿಗೆಲ್ಲ
ತೋರಿ ಬರಲು ಬಯಸಿದ.

'ಹೊರಗೆ ಆಡಿ ಬರುವೆ' ನೆಂದು
ತಾಯಿಯೊಡನೆ ಕೇಳಿದ
'ಈಗ ಬೇಡ' ವೆನಲು ಆಕೆ
ಕಾಣದಂತೆ ಓಡಿದ

'ಕಮಲಪ್ರಿಯ' ಮದರಾಸು.

ಎದುರಿಗೊಬ್ಬ ಹುಡುಗ ಬಂದ
ಬಡವನಾತ ಸತ್ಯವು
ಕೆದರು ಕೇಶ, ಕೊಳೆ, ಕೃಶಾಂಗ
ಹರಕು ಬಟ್ಟೆ, ಸಾಕ್ಷಿಯು

ಅವನ ಕಂಡು ಹೇಸಿಕೊಂಡು
ಸೋಮು ಹಾರಿ ಸರಿದನು
ಕದಳಿ ಸಿಪ್ಪೆ ಮೇಲೆ ಕಾಲ
ನಿಟ್ಟು ಜಾರಿ ಬಿದ್ದನು

ಕಾಲು ತರೆದು ರಕ್ತಸುರಿದು
ಅಳುವುದನ್ನು ಕಂಡ ಬಡವ
ಓಡಿ ಬಂದು ಮಮತೆಯಿಂದ
ಎತ್ತಿ ತಡವಿ ನಿಲಿಸಿದ

ತನ್ನ ನಡೆಗೆ ನಾಚಿಕೊಂಡು
ಸೋಮು ಮನೆಗೆ ನಡೆದನು
ತಾಯಿಯೊಡನೆ ಎಲ್ಲ ಹೇಳಿ
ಅತ್ತು ಕಾಲ ಕಳೆದನು

ಕಂಡ ರಾತ್ರಿ ಸೋಮು ಕನಸ
ಅದೇ ಬಡವ ಬಾಲಕ
ಆದರೀಗ ಹೇಸಿಕೊಳದೆ
ಸೋಮು ಮಮತೆ ತೋರಿದ.





# ಯಾರು ಹೆಚ್ಚು?

ಹಿಂದೆ ದಂಡಕನೆಂಬ ರಾಕ್ಷಸನೊಬ್ಬನು ವಿಂಧ್ಯಪರ್ವತದಲ್ಲಿ ವಾಸವಾಗಿದ್ದನು. ಅವನು ಮಹಾ ಬಲಶಾಲಿ, ಹಾಗೂ ಬುದ್ಧಿವಂತ.

ಹಾಗೆಯೇ, ಹಿಮವತ್ಪರ್ವತದಲ್ಲಿ ಭೀಷಣನೆಂಬ ರಾಕ್ಷಸನಿದ್ದನು. ಆತನು ದಂಡಕನ ಒಂದೂವರೆಯಷ್ಟು ಶಕ್ತಿವಂತ, ಹಾಗೂ ದೇಹವುಳ್ಳವನು.

ಭೀಷಣನು ಒಮ್ಮೆ ದಂಡಕನ ಶೌರ್ಯವನ್ನು ಕೇಳಿ, ಅವನನ್ನು ಸೋಲಿಸಬೇಕೆಂಬ ಉದ್ದಿಶ್ಯದಿಂದ ವಿಂಧ್ಯಪರ್ವತದೆಡೆಗೆ ಹೊರಟನು.

ಭೀಷಣನು ಬರುವುದನ್ನು ದೂರದಿಂದಲೇ ನೋಡಿದ ದಂಡಕನು, ಭೀತಿಪಟ್ಟವನಾಗಿ, ಹೆಂಡತಿಯನ್ನು ಕರೆದು ಕೇಳಿದನು. "ನೋಡು, ಈಗ ಭೀಷಣನು ಬರುತ್ತಾನೆ. ಯುದ್ಧವಾದಲ್ಲಿ ಅವನು ನನ್ನನ್ನು ಕೊಲ್ಲುತ್ತಾನೆ. ಆದುದರಿಂದ ಒಂದು ಉಪಾಯ ಮಾಡಬೇಕು. ನಾನೀಗ ದಂಡಕನ ಆರು ತಿಂಗಳ ಮಗು. ಹುಂ........ತಿಳಿಯಿತಲ್ಲವೇ?" ಎಂದ.

ದಂಡಕನು ಅಲ್ಲಿಯೇ ಇದ್ದ ಮಂಚದ ಮೇಲೆ ಮುದುರಿಕೊಂಡು ಮಲಗಿದ. ಅವನ ಹೆಂಡತಿ ಅವನ ಮೇಲೆ ದುಪಟಿಗಳನ್ನು ಹೊದಿಸಿ ಅಲ್ಲಿ ಕುಳಿತಳು.

ಅಷ್ಟರಲ್ಲಿ ಗರ್ಜಿಸುತ್ತ ಬಂದ ಭೀಷಣ. "ಎಲ್ಲಿದ್ದಾನೆ, ಆ ದಂಡಕ? ಅವನನ್ನು ಕೊಂದು, ರಕ್ತಪಾನ ಮಾಡಿಬಿಡುವೆ! ಎಲ್ಲಿ ತೋರಿಸು" ಎಂದು ಕೂಗಿದ.

"ಹುಶ್, ಗಲಾಟೆ ಮಾಡಬೇಡ. ದಂಡಕನ ಆರು ತಿಂಗಳ ಮಗು ಇಲ್ಲಿ ಮಲಗಿದೆ. ಅದು ಎಚ್ಚರವಾಗಿ ಕೂಗಿದರೆ, ದಂಡಕ ಬಂದು ನಿನ್ನನ್ನು ಸಿಗಿದುಬಿಟ್ಟಾನು! ಗಲಾಟೆ ಮಾಡದೆ ಹೋಗು" ಎಂದಳು ದಂಡಕನ ಭಾರ್ಯೆ.

ಭೀಷಣ ನೋಡಿದ. "ದಂಡಕನ ಆರು ತಿಂಗಳ ಮಗು—ಅಬ್ಬಾ! ಎಷ್ಟು ಎತ್ತರವಾಗಿದೆ! ಎಷ್ಟು ಬಲಶಾಲಿಯಾಗಿದೆ! ಅಂದ ಮೇಲೆ, ದಂಡಕ....? ಹಂ! ನನ್ನ ಹತ್ತರಷ್ಟಿರಬಹುದು!!" ಹೆದರಿಕೆ ಅವನನ್ನು ಅತಿಯಾಗಿ ಪೀಡಿಸಲು ಪ್ರಾರಂಭಿಸಿ, ಆತ ಭಯದಿಂದ ಕಾಲು ಕಿತ್ತವನು ಹಿಮಾಲಯಕ್ಕೆ ಹೋಗುವವರೆವಿಗೂ ಹಿಂತಿರುಗಿ ನೋಡಲಿಲ್ಲ ಸಹ.

ದಂಡಕ, ನಂತರ ಎದ್ದು, ಹೊಟ್ಟೆ ಹುಣ್ಣಾಗುವಷ್ಟು ನಕ್ಕ. ಯಾರು ಹೆಚ್ಚು?

ಕೆ. ಟಿ. ಲಕ್ಷ್ಮೀನಾರಾಯಣ, ಶೃಂಗೇರಿ.

# ಅಸೂಯೆಯ ಫಲ

ಒಂದಾನೊಂದು ಕಾಲದಲ್ಲಿ ಶಂಭುದಾಸ್, ದಂಡಪಾಣಿ ಎಂಬ ಇಬ್ಬರು ಸಹೋದರರಿದ್ದರು. ಶಂಭುದಾಸನು ತನ್ನ ಪಾಲಿಗೆ ಬಂದ ನಾಲ್ಕು ಎಕರೆ ಜಮೀನಿನಲ್ಲಿ ವ್ಯವಸಾಯ ಮಾಡಿ ಜೀವಿಸುತ್ತಿದ್ದ. ದಂಡಪಾಣಿ ತನ್ನ ಭಾಗದ ನಾಲ್ಕು ಎಕರೆ ನೆಲವನ್ನು ಮಾರಿ, ವ್ಯಾಪಾರ ಮಾಡಿ, ಕೆಲವು ದಿನಗಳಲ್ಲೇ ಲಕ್ಷಾಧಿಕಾರಿಯಾದ. ವ್ಯಾಪರದಲ್ಲಿದ್ದಂತೆ, ವ್ಯವಸಾಯದಲ್ಲಿ ಅತಿ ಶೀಘ್ರವಾಗಿ ಉನ್ನತ ಸ್ಥಿತಿಗೆ ಬರಲು ಅವಕಾಶಗಳು ತುಂಬಾ ಕಡಿಮೆ. ಆದುದರಿಂದ ಶಂಭುದಾಸ್ ಮೊದಲಿನಂತೆಯೇ ಇದ್ದುಬಿಟ್ಟ.

ಅದೊಂದು ವರ್ಷ ಶಂಭುದಾಸನು ನಾಲ್ಕು ಎಕರೆ ಜಮೀನಿನಲ್ಲಿ, ಒಂದಿಷ್ಟು ಸ್ಥಳವನ್ನು ಉತ್ತು, ಕಳೆ ತೆಗೆದು, ಒಂದು ಬುಟ್ಟಿ ದಂಟಿನ ಸೊಪ್ಪಿನ ಬೀಜವನ್ನು ಎರಚಿದ. ಒಳ್ಳೇ ಮಳೆ ಆಯಿತು ಆ ವರ್ಷ. ಬೀಜಗಳೆಲ್ಲಾ ಮೊಳಕೆ ಆದವು. ಕೆಲ ದಿನಗಳಲ್ಲೇ ಆ ಸ್ಥಳವೆಲ್ಲಾ ಮದುಮಗಳ ಮುಖ ಕಳಕಳಿಸುತ್ತಿರುವಂತೆ ಕಂಗೊಳಿಸುತಿತ್ತು. ದಿನಾ ಒಂದು ಬುಟ್ಟಿ ಸೊಪ್ಪು ಕಿತ್ತುಕೊಂಡು ಹೋಗಿ, ಮಾರಿ, ಆ ಹಣದಿಂದ ಆತನು ಹೊಟ್ಟೆ ಹೊರೆಯುತ್ತಿದ್ದ.

"ಅಲ್ಲಾಪ್ಪಾ, ನಿನ್ನ ತಮ್ಮ ಇದೇ ಊರಲ್ಲಿ ತುಂಬಾ ಐಶ್ವರ್ಯವಂತನಾಗಿರುವಾಗ ನೀನು ಹೀಗೆ ಕಷ್ಟಪಡುವುದೆಂದರೇನು?" ಎಂದು ಯಾರಾದರೂ ಕೇಳಿದರೆ "ಅವರವರು ಕೇಳಿಕೊಂಡು ಬಂದಿದ್ದು ಅವರವರು ಅನುಭವಿಸುತ್ತಾರೆ. ಅವನ ನಸೀಬು ಏನೋ ಚೆನ್ನಾಗಿತ್ತು. ಏನೋ ಒಂದಿಷ್ಟು ಕಾಸು ಸಂಪಾದಿಸಿಕೊಂಡ ಎಂದು ಸಂತೋಷ ಪಡಬೇಕೆ ಹೊರತು, ಅವನ ಬಾಗಿಲಿಗೆ ಹೋಗಬಾರದು" ಎಂದು ಸಮಾಧಾನ ಹೇಳಿ ತನಗೆ ಸಿಕ್ಕಿರುವುದರಲ್ಲೇ ಸಂತೃಪ್ತನಾಗಿದ್ದ ಆ ಅಣ್ಣ. ತಮ್ಮನನ್ನು ಕಂಡು ಎಂದೂ ಅಸೂಯೆ ಪಡುತ್ತಿರಲಿಲ್ಲ.

ಹೊಲದಲ್ಲಿ ಬೆಳೆದ ದಂಟಿನ ಮೊಳಕೆಗಳೆಲ್ಲಕ್ಕಿಂತಲೂ ಒಂದು ಮೊಳಕೆ ತುಂಬಾ ಚೆನ್ನಾಗಿ ಹುಲುಸಾಗಿ ಬೆಳೆದು, ನೋಡಲು ತುಂಬಾ ಸೊಗುಸಾಗಿ ಕಾಣಿಸುತಿತ್ತು. ಅದನ್ನು ಕೀಳಲು

ಗೌರೀನಾಥಶಾಸ್ತ್ರಿ, ಗದಗ.





ಕೇವಲ ಪ್ರದರ್ಶನಕ್ಕಾಗಿಯೇ ಬಿಟ್ಟುಬಿಡ ಬೇಕೆಂದು ನಿರ್ಣಯಮಾಡಿದ.

ಮತ್ತೆ ಕೆಲವು ದಿನಗಳಾದಮೇಲೆ ಒಂದು ದಿನ ಆ ಊರಿನ ರಾಜ ತನ್ನ ಪರಿವಾರ ದೊಂದಿಗೆ ಆ ದಾರಿಯಲ್ಲಿ ಹೋಗುತ್ತಿರಲು ಆತನಿಗೆ ಈ ದಂಟಿನ ಗಿಡ ಕಾಣಿಸಿತು. ಆತನು ಆಶ್ಚರ್ಯಚಕಿತನಾಗಿ "ದಂಟೆಂದ ರೇನು! ಈ ರೀತಿ ಮರವಾಗಿ ಬೆಳೆಯುವು ದೆಂದರೇನು" ಎಂದು ಆ ಗಿಡದಮೇಲೆ ಕಣ್ಣು ಹಾಕಿದ.

ಆಗ ಶಂಭುದಾಸನು "ಮಹಾಸ್ವಾಮಿ, ಈ ದಂಟಿನ ಗಿಡ ನನ್ನ ಹೊಲದಲ್ಲಿದ್ದರೇನು ಸೊಗುಸು. ಇದು ನಿಮ್ಮ ಉದ್ಯಾನವನದಲ್ಲಿರ ಬೇಕಾದ ಮೊದಲನೇ ರಕಂ ದಂಟು" ಎಂದ. ರಾಜನಿಗೆ ತುಂಬಾ ಆನಂದವಾಯಿತು. ಶಂಭುದಾಸನು ಆ ಗಿಡದ ಸುತ್ತ ಒಂದು ಅಡಿ ನೆಲ ಹೆಂಟೆಯಾಗಿ ಬರುವಂತೆ ಮಿಾಟಿ ತೆಗೆದು ಆ ರಥದಲ್ಲಿಟ್ಟು, ಆತನ ಆಜ್ಞೆಯಂತೆ ತಾನೂ ಸಹ ಆತನೊಂದಿಗೆ ಉದ್ಯಾನವನಕ್ಕೆ ಹೋಗಿ, ಅಲ್ಲಿ ಅದನ್ನು ತಾನೇ ನೆಟ್ಟುಬಿಟ್ಟು ಬಂದ.

ಹಿಂತಿರುಗುವಾಗ ರಾಜ ಆತನಿಗೆ ಮೊಹರುಗಳ ಚೀಲವನ್ನೊಂದು ಬಹುಮಾನ ವಾಗಿ ಕೊಟ್ಟು ಕಳುಹಿಸಿದ.

ಅಕಸ್ಮಾತ್ ಆಗಿ ಲಭಿಸಿದ ಹಣದಿಂದ ಆತನ ಬಡತನವು ದೂರವಾಗಿ, ಶಂಭು ದಾಸನು ಸ್ಥಿತಿವಂತನಾದ. ಒಂದೇ ಒಂದು

ಮನಸ್ಸು ಬಾರದೆ ಹಾಗೇ ಬಿಟ್ಟುಬಿಡಲು ಅದು ಬಿದುರಿನ ಗಿಡದಂತೆ ಎತ್ತರವಾಗಿ ಬೆಳೆ ಯಿತು. ಆ ದಾರಿ ಬಂದು ಹೋಗುವ ರೈತರಿ ಗೆಲ್ಲಾ ಅದನ್ನು ಕಂಡು ಆಶ್ಚರ್ಯ. "ನಾವೂ ಚಿಕ್ಕಂದಿನಿಂದ ದಂಟಿನ ಸೊಪ್ಪು ಬೆಳೆಯಿಸಿ ದ್ದೇವೆ. ಎಂದೂ ಅವು ಇಷ್ಟು ಎತ್ತರ ಬೆಳೆ ದಿದ್ದನ್ನು ಕಂಡಿಲ್ಲ, ಕೇಳಿಲ್ಲ" ಎಂದು ಹೇಳು ವರು. ಆ ಗಿಡವನ್ನು ನೋಡಿ ಎಲ್ಲರೂ ಮೆಚ್ಚಿಕೊಳುತ್ತಿರುವುದನ್ನು ಕಂಡು ಆತನು ಅದನ್ನು ಕಾಲಾಣಿಗೋ, ಅರ್ಧಾಣಿಗೋ ಮಾರಕೂಡದೆಂದು ನಿರ್ಧರಿಸಿದ.

ಅದು ದಪ್ಪವಾಗಿ ಬೆಳೆದು ಬಲಿತು ಹೋಗಿದ್ದುದರಿಂದ ಹುಳಿಯಲ್ಲಿ ಹಾಕಿದರೂ, ಪದಾರ್ಥ ಮಾಡಿದರೂ ಅಷ್ಟೇನೂ ರುಚಿಕರ ವಾಗಿ ಇರಲಾರದು. ಆದುದರಿಂದ ಅದನ್ನು



ದಂಟಿನ ಗಿಡದಿಂದ ಆತನು ಈ ರೀತಿ ಹಣ ವನ್ನು ಗಳಿಸಿರುವುದನ್ನು ಕಂಡು ಗ್ರಾಮಸ್ಥರಿಗೆಲ್ಲಾ ಅಸೂಯೆಯುಂಟಾಯಿತು. ಉಳಿದವರ ಮಾತು ಅತ್ತ ಇರಲಿ. ಆತನ ತಮ್ಮನಿಗೇ ತುಂಬಾ ಕಷ್ಟವಾಗಿ ತೋಚಿತು. ಅಣ್ಣನಿಗೆ ಒದಗಿದ ಉತ್ತಮಸ್ಥಿತಿಗೆ ಸಂತೋಷಿಸುವ ಬದಲು ವ್ಯಾಕುಲಗೊಂಡ.

'ಆತನಿಗೆ ಸುದಿನಗಳು ಬಂದವು. ನನ್ನಂತೆಯೇ ನನ್ನಣ್ಣನೂ ಸಹ ಸುಖವಾಗಿರುತ್ತಾನೆ' ಎಂದು ಸಂತಸ ಪಡುವುದನ್ನು ಬಿಟ್ಟು ತನ್ನ ಹಣವನ್ನೇ ಆತನು ತಿಂದುಬಿಡುತ್ತಿರುವಂತೆ ಪರಿಪರಿವಿಧವಾಗಿ ಪರಿತಪಿಸಿದ ದಂಡಪಾಣಿ. "ಏನಾದರಾಗಲಿ ನಾನೂ ಸಹ ರಾಜನ ಹತ್ತಿರ ಹೋಗಿ ಅಣ್ಣನಿಗಿಂತಲೂ ಹೆಚ್ಚು ಬಹುಮಾನ ಪಡೆದುಕೊಂಡ ಹೊರತು ನಿದ್ದೆ ಮಾಡಕೂಡದು' ಎಂದು ಮನಸ್ಸು ಗಟ್ಟಿ ಮಾಡಿಕೊಂಡ. ರಾಜನಿಗೆ ಎಂತಹ ಕಾಣಿಕೆ ಹಿಡಿದುಕೊಂಡು ಹೋಗಬೇಕೋ ಆತನಿಗೆ ತಿಳಿಯದಾಯಿತು. ದೀರ್ಘವಾಗಿ ಯೋಚನೆ ಮಾಡಿದ. 'ಒಂದು ದಂಟಿನ ಗಿಡಕ್ಕೇ ಅಷ್ಟೊಂದು ಹಣ ಬಹುಮಾನವಾಗಿ ಕೊಟ್ಟಿದ್ದಾನೆ ರಾಜ. ಬೆಲೆಬಾಳುವ ಕಾಣಿಕೆಯನ್ನು ತೆಗೆದುಕೊಂಡು ಹೋಗಿ ಕೊಟ್ಟರೆ ಕನಿಷ್ಟ ಪಕ್ಷ ಅಣ್ಣನಿಗೆ ಕೊಟ್ಟ ಬಹುಮಾನಕ್ಕೆ ಹತ್ತರಷ್ಟಾದರೂ ಹೆಚ್ಚಾಗಿ ಕೊಡಲಾರನೇ?' ಎಂದುಕೊಂಡು, ತನ್ನ ಆಸ್ತಿಗೆಲ್ಲಾ ಬಂಗಾರ ಕೊಂಡು ಭಾರಿ ಗುರಾಣಿ ಒಂದು ಸಿದ್ಧಮಾಡಿ



ಸಿದ. ನವರತ್ನಗಳನ್ನು ಆ ಡಾಲಿನಲ್ಲಿ ಹುದುಗಿಸಿದ. ಈ ರೀತಿ ತಯಾರಾದ ಆ ಡಾಲನ್ನು ಎರಡು ಕುದುರೆ ಕಟ್ಟಿದ ಸಾರೋಟಿನಲ್ಲಿಟ್ಟುಕೊಂಡು ಅರಮನೆಗೆ ಹೋಗಿ ಮಹಾರಾಜನಿಗೆ ಕಾಣಿಕೆಯಾಗಿ ಸಮರ್ಪಿಸಿದ. ಆ ಡಾಲನ್ನು ಕಂಡು ರಾಜಗೆ ಅಪಾರ ಆನಂದವಾಯಿತು. "ಸಚಿವೋತ್ತಮನೇ, ಇಷ್ಟೊಂದು ಬೆಲೆಬಾಳುವ ಕಾಣಿಕೆಯನ್ನು ತಂದ ಈತನಿಗೆ ನಾವು ಬದಲಾಗಿ ಯಾವುದಾದರೊಂದು ಭಾರಿ ಉಡುಗೊರೆಯನ್ನು ಕೊಡಬೇಕಲ್ಲವೇ? ಯಾವ ಬಹುಮಾನ ಕೊಡೋಣ, ಚೆನ್ನಾಗಿ ಯೋಚಿಸಿ ಹೇಳು" ಎಂದ ರಾಜ.

ಅದಕ್ಕೆ ಮಂತ್ರಿ "ಇದಕ್ಕೆ ಆಲೋಚಿಸುವುದಾದರೂ ಏನಿದೆ. ಆನೆಗಳೂ, ಒಂಟೆಗಳೂ,



ಕುದುರೆಗಳು ಮುಂತಾದುವೇನಾದರೂ ಕೊಡಬಹುದು. ಅವುಗಳಮೇಲೆ ಮೊಹರುಗಳ ಚೀಲಗಳನ್ನು ಬೇಕಾದರೆ ಹಾಕಿ ಕಳುಹಿಸಬಹುದು" ಎಂದ. ರಾಜನಿಗೆ ಈ ಸಲಹೆ ತೃಪ್ತಿಯಾಗಲಿಲ್ಲ.

"ಇಷ್ಟೊಂದು ಬೆಲೆಬಾಳುವ ಡಾಲನ್ನು ಬಹುಮಾನವನ್ನಾಗಿ ಕೊಡಬಲ್ಲವನು ತುಂಬಾ ಹಣಗಾರನಾಗಿಯೇ ಇರಬೇಕು. ಅಂಥವನಿಗೆ ನಾನು ಮತ್ತೆ ಹಣದ ಮೂಟೆಗಳನ್ನು ಕಳುಹಿಸುವುದರಲ್ಲೇನಿದೆ ದೊಡ್ಡಸ್ತಿಕೆ? ಜಿಲೇಬಿ ತಿಂದು ತಿಂದು ಬೇಸರ ಬಂದಿರುವವನಿಗೆ ಮತ್ತಷ್ಟು ಜಿಲೇಬಿ ಬಡಿಸಿದಂತೆ ಆಗುವುದು. ಆದುದರಿಂದ ಅಪೂರ್ವವಾದ ವಸ್ತುವೊಂದನ್ನು ಕೊಡಬೇಕು" ಎಂದ ರಾಜ. ಯಾವ ನಿರ್ಧಾರಕ್ಕೂ ಬರಲಾರದೆ ಅಂದಿಗೆ ಸಭೆಯನ್ನು ಮುಕ್ತಾಯ ಮಾಡಿ, ರಾತ್ರಿ ಮತ್ತೆ ಆಲೋಚನಾಪರವಶನಾದ ರಾಜ.

ಮರುದಿನ ರಾಜನು ಉದ್ಯಾನವನದಲ್ಲಿ ತಿರುಗಾಡುತ್ತಿರಲು ಆತನಿಗೆ ಶಂಭುದಾಸನು ನೆಟ್ಟು ಹೋಗಿದ್ದ ದಂಟಿನ ಗಿಡ ಕಾಣಿಸಿತು. ಅದನ್ನು ಕಂಡಕೂಡಲೇ ರಾಜನಿಗೆ 'ಇದಕ್ಕಿಂತಲೂ ಅಪೂರ್ವವಾದ ವಸ್ತು ಬೇರೊಂದು ಇರಲಾರದು. ನವರತ್ನ ಖಚಿತವಾದ ಡಾಲನ್ನು ತಂದುಕೊಟ್ಟ ದಂಡಪಾಣಿಗೆ ಇದೇ ತಕ್ಕ ಬಹುಮಾನ' ಎಂದು ತೀರ್ಮಾನಿಸಿದ.

ಆ ಗಿಡದ ಸುತ್ತಲೂ ಮಣ್ಣಿನ ಮುದ್ದೆಯೊಂದಿಗೆ ತುಂಬಾ ಎಚ್ಚರಿಕೆಯಿಂದ ಅಗೆಸಿ ಆತನ ಮನೆಗೆ ಕಳುಹಿಸಿದ ರಾಜ. ಆನೆಗಳ ಮೇಲೆ, ಒಂಟೆಗಳ ಮೇಲೆ, ಕುದುರೆಗಳ ಮೇಲೆ, ಚಿನ್ನದ ನಾಣ್ಯಗಳು ತುಂಬಿರುವ ಚೀಲಗಳು ಬರುವುವೆಂದು ಹಾದಿಕಾಯುತ್ತಿದ್ದ ದಂಡಪಾಣಿಗೆ ಈ ದಂಟಿನ ಗಿಡ ಪ್ರತ್ಯಕ್ಷವಾಗಲು ಎದೆ ಒಡೆಯಿತು. ಆ ದಂಟಿನ ಗಿಡದ ಎದುರಾಗಿ ನಿಂತುಕೊಂಡು "ನನ್ನ ಐಶ್ವರ್ಯವನ್ನೆಲ್ಲಾ ನುಂಗಿ ಹಾಕಿದ ಗಿಡವೇ, ನಿನ್ನನ್ನು ನಾನೇನು ಮಾಡಿಕೊಳ್ಳಲಿ? ಕಾಂಡ ಬೆಳೆದಿರುವ ಮರವಾದರೂ ಆಗಿದ್ದರೆ ಒಣಗಿಸಿ ಒಲೆಯಲ್ಲಾದರೂ ಇಟ್ಟುಕೊಳ್ಳಬಹುದಾಗಿತ್ತು. ಅದಕ್ಕೂ ಉಪಯೋಗವಿಲ್ಲವಲ್ಲಾ ನೀನು' ಎಂದು ಕಣ್ಣೀರು ಸುರಿಸಿದ.






## 18

ಸ್ವಲ್ಪ ಹೊತ್ತಿಗೆಲ್ಲಾ ಹೊಗೆ ಮಾಯವಾಯಿತು. ಮತ್ತೆ ಅಡಿ ಮುಂದೆ ಇಡುವಷ್ಟರಲ್ಲಿ ಗುಹೆ ಎಲ್ಲವೂ ವಿವಿಧ ಶಬ್ದಗಳಿಂದ ಆವರಿಸಿತು. ಆದರೂ ಉದಯನನು ಬೆದರಲಿಲ್ಲ. ದೇವಿಯ ಎದುರಾಗಿ ನಿಂತ. " ಇಷ್ಟೊಂದು ನಿರಪರಾಧಿ ಜನರ ಪ್ರಾಣಕೊಳ್ಳುವುದು ನಿನಗೆ ನ್ಯಾಯವೇ, ತಾಯಿ? ಆ ಧೂರ್ತನಿಗೆ ಮತ್ತಷ್ಟು ಶಕ್ತಿ ಪ್ರಸಾದಿಸುವುದರಿಂದ ಪ್ರಪಂಚಕ್ಕೆ ಆಗುವ ಉಪಯೋಗವಾದರೂ ಏನು?' ಎಂದ.

ದೇವಿ ಬಾಯಿಬಿಡಲಿಲ್ಲ. ಕದಲಲಿಲ್ಲ.

" ಇಷ್ಟು ದಿನಗಳವರೆವಿಗೆ ನಿದ್ರಾಹಾರಗಳಿಲ್ಲದೆ, ಪಡಬಾರದ ಅವಸ್ಥೆಗಳನ್ನು ಪಟ್ಟೆವು. ಪ್ರಾಣ ಹೋದರೂ ಸರಿ, ಅವನನ್ನು ಕೊಲ್ಲದೆ ಬಿಡಲಾರೆ, ಅವನ ಪ್ರಾಣವೆಲ್ಲಿದೆಯೋ ಹೇಳಿ ಪುಣ್ಯ ಕಟ್ಟಿಕೋ ತಾಯೇ" ಎಂದು ಉದಯನನು ಮತ್ತೆ ಪ್ರಾರ್ಥಿಸಿದ. ಇದಕ್ಕೂ ಸಮಾಧಾನವೀಯಲಿಲ್ಲ ದೇವಿ.

ಇದು ಸರಿಯಲ್ಲವೆಂದು ನೆನೆಸಿ, ದೇವಿಯ ಕೈಯಲ್ಲಿದ್ದ ಪಕ್ಷಿಯನ್ನು ತನ್ನ ಕತ್ತಿಯಿಂದ ಒಂದೇ ಏಟಿಗೆ ತುಂಡರಿಸಿ ಚೆಲ್ಲಿದ ಉದಯನ. ಆ ಹದ್ದು ಅಲ್ಲಿಯೇ ಇದ್ದ ಅಗ್ನಿಕುಂಡದಲ್ಲಿ ಬಿದ್ದಿತು. ಹಾಗೆ ಬಿದ್ದ ತಕ್ಷಣವೇ ದೇವಿಯ ವಿಗ್ರಹವು ಹಠಾತ್ತನೆ ಮಾಯವಾಗಿ ಆ ಪ್ರದೇಶವೆಲ್ಲವೂ ಬ್ರಹ್ಮಾಂಡವಾದ ಬೆಳಕಿನಿಂದ ಆವರಿಸಿತು.

ಉದಯನನು ಸರಕ್ಕನೆ ತಿರುಗಿ ನೋಡಿದ. ಅದಕ್ಕೆ ಮೊದಲು ತಾನು ದಾಟಿಕೊಂಡು ಬಂದಿದ್ದ ದ್ವಾರಗಳೂ, ಕೋಣೆಗಳೂ ಕಾಣಿಸಲಿಲ್ಲ, ಎಲ್ಲಾ ಒಂದು ಮರುಭೂಮಿಯಂತಿದೆ.

ಉದಯನನು ಹಿಂತಿರಳಿದ. ರತ್ನದ್ವಾರವಿದ್ದ ಸ್ಥಳದಲ್ಲಿ ರತ್ನಗಳಿಂದ ಹುದುಗಿಸಲ್ಪ



ಟ್ಟಿದ್ದ ಬಾತು ಮೊಟ್ಟೆಗಾತ್ರದ ಒಂದು ಮೊಟ್ಟೆ ಕಾಣಿಸಿತು. ಅದನ್ನು ತೆಗೆದುಕೊಂಡು ಮತ್ತಷ್ಟು ದೂರ ಬಂದರೆ ಅಂತಹುದೇ ಒಂದು ಬೆಳ್ಳಿಮೊಟ್ಟೆ ಕಾಣಿಸಿತು. ಅದನ್ನು ತೆಗೆದುಕೊಂಡು ಇನ್ನಷ್ಟುದೂರ ಹೋದ. ಅಲ್ಲೊಂದು ಬಂಗಾರದ ಮೊಟ್ಟೆ ಕಾಣಿಸಿತು. ಅದನ್ನೂ ತೆಗೆದುಕೊಂಡು ಮುಂದೆ ಸಾಗಿದ. ಈಗ ಗಡ್ಡದವನನ್ನು ನೇತು ಹಾಕಿದ್ದ ಕೋಣೆ ಸಹ ಕಾಣಿಸದಾಯಿತು.

ಉದಯನನು ವಿಸ್ಮಯಗೊಂಡು ಪಾತಾಳ ಗೃಹದಿಂದ ಹೊರಕ್ಕೆ ಬಂದ. ಆಗಲೇ ರಾಕ್ಷಸನ ಸೇವಕರು ಬಂದು ಅವನನ್ನು ಸುತ್ತುವರಿದರು. ಅವರೊಂದಿಗೆ ಕೊಳದಲ್ಲಿ ಹಂಸ ರೂಪವನ್ನು ಹೊಂದಿದ್ದವರೂ ಸಹ ತಮ್ಮ ತಮ್ಮ ಯಥಾರ್ಥ ರೂಪತಾಳಿ ಬಂದಿದ್ದರು. ಸಹೋದರನು ಕಾಣಿಸಿದ ಕೂಡಲೇ ಸಂಧ್ಯ ತಟಕ್ಕನೆ ಬಂದು ಉದಯನನನ್ನು ಅಪ್ಪಿಕೊಂಡ.

ಇಷ್ಟರಲ್ಲಿ ರಾಕ್ಷಸನ ಸೇವಕರು ಉದಯನನನ್ನು ಹಠಾತ್ತನೆ ಭುಜಗಳ ಮೇಲೇರಿಸಿಕೊಂಡು "ನೀವು ದೇವಸಂಭೂತರು! ನಿಮ್ಮ ಪುಣ್ಯಫಲದಿಂದ ನಮಗೆ ಈಗ ಮುಕ್ತಿ ದೊರೆಯಿತು" ಎಂದು ಏಕಕಂಠದಿಂದ ನುಡಿದರು. ಅವರಲ್ಲೊಬ್ಬನು ಉದಯನನ ಮೊಂಡು ಕೈಯಿಂದ ಸುರಿಯುತ್ತಿದ್ದ ರಕ್ತವನ್ನು ಕಂಡು "ಏನ್ರೋ, ಏನು ನೋಡುತ್ತಿದ್ದೀರಿ. ಹಸುರು ತೆಗೆದುಕೊಂಡು ಬನ್ನಿ" ಎಂದು ಕೂಗಿ ಹೇಳಿದ.

ಹಸುರು ತಂದು ಕೈಗೆ ಕಟ್ಟಿದರು. ಆಗ ಉದಯನನು ಅವರೆಲ್ಲರನ್ನೂ ಕರೆದುಕೊಂಡು ಕೊಳವಿದ್ದ ಸ್ಥಳದ ಹತ್ತಿರ ಹೋದ. ಅಲ್ಲಿಗೆ ಹೋಗಿ ನೋಡಿದರೆ ಕೊಳವಿಲ್ಲ; ಸುತ್ತಮುತ್ತಲಿದ್ದ ಮರಗಿಡಗಳೂ ಕಾಣಿಸದಾದವು. ತನ್ನಂತೆಯೇ ರಾಕ್ಷಸನನ್ನು ಕೊಲ್ಲಲು ಬಂದು ಶಿಲಾರೂಪವನ್ನು ಪಡೆದಿದ್ದ ದುರದೃಷ್ಟಶಾಲಿಗಳ ಪ್ರತಿಮೆಗಳು ಮಾತ್ರ ನಿಂತಿವೆ. ಉದಯನನಿಗೆ ಏನೂ ಅರ್ಥವಾಗಲಿಲ್ಲ. "ಕೊಳವೆಲ್ಲಿ?" ಎಂದು ಕೇಳಿದ. "ಇನ್ನೆಲ್ಲಿಯದು ಸ್ವಾಮಿ ಕೊಳ? ದೇವಿ ಮಾಯವಾದ ಕೂಡಲೇ ಎಲ್ಲಾ ಮಾಯವಾಯಿತು" ಎಂದನೊಬ್ಬ.

"ಮತ್ತೆ ಹಾಗಾದರೆ ಈ ಶಿಲಾ ಪ್ರತಿಮೆಗಳ ಮಾತೇನು?" ಎಂದು ಕಾತುರ ಧ್ವನಿಯಿಂದ ಕೇಳಿದ ಉದಯನ. "ಅವರ ಗತಿ ಇನ್ನಷ್ಟೇ. ಇದ್ದ ಆ ಕೊಳವೂ ಮಾಯವಾಯಿತು. ಇನ್ನು ಅವರಿಗೆ ಮಾಮೂಲು ಸ್ವರೂಪ ಹೇಗೆ ಬರುತ್ತೆ ಹೇಳಿ" ಎಂದರು ಸೇವಕರು.

"ಅಯ್ಯೋ ಎಂಥ ಅಪಚಾರ ನಡೆಯಿತು. ನಿಷ್ಕಾರಣವಾಗಿ ಇಷ್ಟೊಂದು ಜನ ಪ್ರಾಣ ಕಳೆದು ಕೊಳ್ಳಲು ನಾನು ಕಾರಣನಾದೆ" ಎಂದು ಅನುಕಂಪದಿಂದ ನುಡಿದ ಉದಯನ. ಕೊಂಚ ಹೊತ್ತು ಹಾಗೇ ಸುಮ್ಮನಿದ್ದು "ಸಹೋದರ ನಿಶೀಥನು ಏನಾದನೋ, ಆ ಗಡ್ಡದವನ ಸಂಗತಿ ಹೇಗೋ? ರಾಜಕುಮಾರಿಯರ ವಿಷಯ ಏನಾಯಿತೋ ತಿಳಿಯದೆ ಇದೆಯಲ್ಲಾ; ಅವರ ವಿಷಯವನ್ನು ಅರಿಯಬೇಕು" ಎಂದ ಉದಯನ.

"ಹಾಗಾದರೆ ಹೊರಡಿ, ಹೋಗುವ" ಎಂದರು ಸೇವಕರು.

"ಹಾಗಾಗದು. ನೀವೆಲ್ಲಾ ಇಲ್ಲೇ ಇರಿ." ಎಂದು ಅವರನ್ನು ಅಲ್ಲೇ ಕಾವಲಿರಿಸಿ, ಸಂಧ್ಯ ಮತ್ತು ಸ್ವಲ್ಪ ಪರಿವಾರವನ್ನೂ ಕರೆದು ಕೊಂಡು ಹೊರಟ. ಪ್ರಪ್ರಥಮವಾಗಿ ಅವನು ಪ್ರತಾಪನ ರಾಜ್ಯವನ್ನು ಸೇರಿ ಅಲ್ಲಿ ವಿಚಾರಿಸಿದ. ಅದಕ್ಕೆ ಪ್ರತಾಪ "ಅರೆರೆ! ಇಲ್ಲಿಗೆ ಯಾರೂ ಬರಲಿಲ್ಲ. ಅಂದು ನೀನು ಹೋದ ತರುವಾಯ ಮತ್ತೆ ನೋಡುತ್ತಿರುವುದು ಇದೇ




ಮೊದಲು! ಅಲ್ಲ, ಆ ರಾಕ್ಷಸನ ಕೈಯಿಂದ ಹೇಗಪ್ಪಾ ತಪ್ಪಿಸಿಕೊಂಡು ಬಂದೆ?" ಎಂದು ಕೇಳಿದ.

"ಅವನ ವಿಷಯವೇ ನನಗೆ ತಿಳಿಯದು. ಆದರವನ ಮಾಯಾಮಹಲನ್ನು ಮಣ್ಣುಪಾಲು ಮಾಡಿದೆ. ಅದಿರಲಿ. ಮೊದಲು ನನ್ನ ಸಹೋದರನೂ, ರಾಜಕುಮಾರಿಯರೂ ಏನಾದರೋ ತಿಳಿಯಬೇಕು" ಎಂದ.

"ಬೇಕಾದರೆ ನನ್ನ ಪರಿವಾರವನ್ನು ಕಳುಹಿಸಿ ಕೊಡುವೆನು" ಎಂದ ಪ್ರತಾಪ, ತುಂಬಾ ಅಭಿಮಾನವಿರುವಂತೆ.

"ನಿಮ್ಮ ಅಭಿಮಾನವಿದ್ದರೆ ಅಷ್ಟೇ ಸಾಕು" ಎಂದು ಉದಯನನು ಪ್ರತಾಪನ ಹತ್ತಿರ ಅಪ್ಪಣೆ ಪಡೆದು ಮತ್ತೆ ಪರಿವಾರದೊಂದಿಗೆ ಶ್ರಾವಸ್ತಿಯ ಕಡೆಗೆ ಮುಂದಕ್ಕೆ ನಡೆದ.



ಪ್ರತಾಪನ ಸೇವಕರನ್ನು ಕರೆದುಕೊಂಡು ಹೋದ ನಿಶೀಥನ ಗತಿ ಏನಾಯಿತೋ ತಿಳಿಯುವ. ಸಮಯ ನೋಡಿ ಪ್ರತಾಪನ ಸೇವಕರು ನಿಶೀಥನ ತಲೆ ಕಡಿದು ಒಂದು ಅರಣ್ಯದಲ್ಲಿ ಹಾಕಿ ಅವರ ದಾರಿ ಅವರು ಹಿಡಿದರು. ಮಾರನೆಯ ದಿನ ಆ ಸುತ್ತು ಮುತ್ತಲಿನ ಪ್ರದೇಶದಲ್ಲಿ ವಾಸಿಸುತ್ತಿದ್ದ ಒಬ್ಬ ಋಷಿವರ್ಯನು ಆ ದಾರಿಯಲ್ಲಿ ಬರುತ್ತಿರಲು, ಆತನಿಗೆ ನಿಶೀಥನ ರುಂಡ ಮುಂಡಗಳು ಕಾಣಿಸಿದವು. ಅವುಗಳನ್ನು ತನ್ನ ಆಶ್ರಮಕ್ಕೆ ಸೇರಿಸಿ, ಅದರ ವಾರಸುದಾರರು ಯಾರಾದರೂ ಬರುವರೇನೋ ಎಂದು ಎದುರು ನೋಡುತ್ತಿದ್ದ.

ಕೆಲದಿನಗಳಾದ ಮೇಲೆ ಶ್ರಾವಸ್ತಿಯ ದಾನಶೀಲಮಹಾರಾಜನ ಮಂತ್ರಿ ಆ ಋಷ್ಯಾಶ್ರಮಕ್ಕೆ ಬರುವುದು ಸಂಭವಿಸಿತು. ನಿಶೀಥನ ರುಂಡ ಮುಂಡಗಳನ್ನು ಕಂಡು ಗುರುತು ಹಿಡಿದ. "ಎಂತಹ ಪ್ರಮಾದವಾಯಿತು" ಎಂದು ಗಲ್ಲಗಲ್ಲ ಬಡಿದುಕೊಂಡ.

"ಅಪ್ಪಾ ಚಿಂತಿಸಿ ಫಲವಿಲ್ಲ. ದುಃಖಿಸಬೇಡ. ನಾನೂ ನಿನ್ನೊಂದಿಗೆ ಬರುತ್ತೇನೆ. ಒಟ್ಟಾಗಿ ಹೋಗೋಣ, ನಡಿ. ನಾನು ನಿಮಗೆ ಮಾಡಬಹುದಾದ ಉಪಕಾರವೆಲ್ಲಾ ಒಂದೇ! ಜೀವ ಕೊಡುವುದು ನನ್ನಿಂದಂತೂ ಸಾಧ್ಯವಿಲ್ಲ. ಆದರೆ ಎಷ್ಟೇ ವರ್ಷಗಳಾಗಲೀ ಈ ಕಳೇಬರವು ಕೆಡದಂತೆ ಮಾಡಬಲ್ಲೆ" ಎಂದ.

"ಆದಕ್ಕಿಂತಲೂ ಬೇರೇನು ಬೇಕು. ಈ ಆಪತ್ಸಮಯದಲ್ಲಿ ದೇವರಂತೆ ಬಂದಿರಿ. ನಾವು ಈಗ ಶ್ರಾವಸ್ತಿಯನ್ನು ಸೇರಿಕೊಂಡರೆ ಸಾಕು. ಮಿಕ್ಕ ವಿಷಯ ಮಹಾರಾಜರೇ ತಿಳಿಸುವರು" ಎಂದ ಮಂತ್ರಿ. ಅದೇ ಪ್ರಕಾರ ಅವರು ಶ್ರಾವಸ್ತಿ ಸೇರಿದರು. ನೀಶೀಥನ ಕಳೇಬರದೊಂದಿಗೆ ಒಳಗೆ ಪ್ರವೇಶಿಸಲು ಎಲ್ಲರೂ ಗೋಳೋ ಎಂದು ಅಳಲು ಪ್ರಾರಂಭಿಸಿದರು. ಸಂಧ್ಯ, ಉದಯನ, ಅವನ ಮುದಿ ತಾಯಿ ಕರುಳು ಕಿತ್ತು ಬರುವಂತೆ ವಿಲಪಿಸಿದರು. ರಾಜನೂ ಆತನ ಪರಿವಾರವೂ ದುಃಖಸಾಗರದಲ್ಲಿ ಮುಳುಗಿದರು. ಋಷೀಶ್ವರನು ಎಲ್ಲರನ್ನೂ ಸಮಾಧಾನ ಪಡಿಸುತ್ತಿದ್ದನು. ಆ ಸಮಯದಲ್ಲಿ ಗಡ್ಡದವನೂ ಸಹ ಎಲ್ಲಿಂದಲೋ ಅಲ್ಲಿಗೆ ಪ್ರವೇಶಮಾಡಿದ.





ಗಡ್ಡದವನು ಎಂಥ ಪರಿಸ್ಥಿತಿಯಲ್ಲಿ ಇಲ್ಲಿಗೆ ಬಂದು ಸೇರಿದನೋ ನಿಮಗೆ ಗೊತ್ತೇ? ಅವನನ್ನು ಮಾಯಾಮಹಲಿನಲ್ಲೇ ಉಳಿಯ ಗೊಟ್ಟರೆ, ಯಾವುದೋ ಯುಕ್ತಿ ಹೂಡಿ ತನ್ನ ಪ್ರಾಣಕ್ಕೆ ಸಂಚಕಾರ ತರುವನೆಂದು ರಾಕ್ಷಸನಿಗೆ ಮೊದಲಿಂದಲೂ ಅನುಮಾನವಿದ್ದೇ ಇತ್ತು. ಆದ್ದರಿಂದ ಸಂಚಾರಕ್ಕೆ ಹೋಗುವಾಗ ಅವನನ್ನೂ ಸಹ ತನ್ನ ಸಂಗಡ ಕರೆದುಕೊಂಡು ಹೋದ.

ಒಂದು ಸಾರಿ ರಾಕ್ಷಸನು ಗಡ್ಡದವನನ್ನು ಸಂಗಡ ಕರೆದುಕೊಂಡು ಆಕಾಶ ಮಾರ್ಗದಲ್ಲಿ ಸಂಚರಿಸುತ್ತಿದ್ದಾನೆ. ಕೆಳಗೆಲ್ಲಾ ಮಹಾ ಸಮುದ್ರ. ಈ ಸ್ಥಿತಿಯಲ್ಲಿರುವಾಗ ಉದಯನನು ದೇವಿಯ ಕೈಯಲ್ಲಿದ್ದ ಪಕ್ಷಿಯನ್ನು ಕೊಂದ ಕೂಡಲೇ ಇಲ್ಲಿ ಆಕಾಶ ಮಾರ್ಗದಲ್ಲಿ ಹದ್ದಿನ ರೂಪತಾಳಿದ್ದ ರಾಕ್ಷಸನು ತನ್ನ ನಿಜರೂಪವನ್ನು ಪಡೆದು 'ಹರಹರಾ' ಎಂದು ತಕ್ಷಣವೇ ಪ್ರಾಣಬಿಟ್ಟ.

ಆಗ ಹದ್ದಿನೊಂದಿಗೆ ನಮ್ಮ ಗಡ್ಡದವನೂ ಇದ್ದನಷ್ಟೆ. ಅವನೂ ಸಹ ಸಮುದ್ರ ಮಧ್ಯದಲ್ಲಿ ಬಿದ್ದ. ಆದರೆ ಪ್ರಯಾಸಪಟ್ಟು ಎರಡು ದಿನ ಈಜಿಕೊಂಡು, ಈಗಲೋ ಆಗಲೋ ಎನ್ನುತ್ತಿದ್ದ ಪ್ರಾಣದೊಂದಿಗೆ ದಡ ಸೇರಿಕೊಂಡ.

ಮಾಯಾಭವನ ಮಣ್ಣುಪಾಲಾಯಿತೆಂದೂ, ಮತ್ತೆ ಯಾವುದೇ ವಿಧವಾದ ತೊಂದರೆಯೂ ಇರಲಾರದೆಂದೂ ಗ್ರಹಿಸಿದ ಗಡ್ಡದವ. ಮುಂದಿನ ವಿಷಯವೇನಪ್ಪಾ ಎಂದು ಯೋಚಿಸುತ್ತಾ, ತನಗೆ ಎದುರಾದ ವ್ಯಕ್ತಿಯನ್ನು ಕುರಿತು "ಈ ಊರ ಹೆಸರೇನು?" ಎಂದ. ಅದಕ್ಕೆ ಆತ ಶ್ರಾವಸ್ತಿ ನಗರವೆಂದು ಹೇಳಲು, ಗಡ್ಡದವನ ಆನಂದಕ್ಕೆ ಮೇರೆಯೇ ಇಲ್ಲ.

ಆದರೆ ಅವನು ಬಹಳ ಉತ್ಸಾಹದಿಂದ ಪ್ರವೇಶಿಸಿದರೆ ಇಲ್ಲಿ ಎಲ್ಲಾ ಗೊಂದಲವಾಗಿದೆ. ಆದರೇನು? ಎಷ್ಟೆಷ್ಟೋ ವ್ಯೂಹಗಳನ್ನು ಭೇದಿಸಿಕೊಂಡು ಬಂದಿದ್ದ ಆಸಾಮಿ ಗಡ್ಡದವ, ಖ್ಯಾತಿಹೊಂದಿದ್ದ ರಾಕ್ಷಸನ ಕೈಕೆಳಗೆ ಪಳಗಿದವ. ಸಾಮಾನ್ಯರಂತೆ ಪ್ರತಿ ವಿಷಯದಲ್ಲೂ ಅಧೈರ್ಯಪಡುವನೇ? ಎಲ್ಲರನ್ನೂ ಸಮಾಧಾನ ಪಡಿಸಿ "ಇದುವರೆವಿಗೂ ಎಲ್ಲಾ ನೆನೆಸಿದ್ದಂತೆಯೇ ನಡೆಯಿತು. ಹೆದರಬೇಡಿ" ಎಂದ.





ಉದಯನನನ್ನು ಹತ್ತಿರಕ್ಕೆ ಕರೆದು "ಅಣ್ಣಾ, ಇದೆಲ್ಲಾ ಪ್ರತಾಪನ ಮೋಸವಿರಬೇಕೇ ಹೊರತು ಮತ್ತೇನಿಲ್ಲ. ಭಸ್ಮಗಳನ್ನೂ, ಅಂಜನಗಳನ್ನೂ ಅವನೇ ಹಾರಿಸಿದ್ದಾನೆ. ಮೊದಲು ಅವುಗಳನ್ನು ಹಿಂದಕ್ಕೆ ಪಡೆಯಲು ಪ್ರಯತ್ನ ಮಾಡು" ಎಂದ.

ಉದಯನನು ಕ್ಷಣವಾದರೂ ಅಲ್ಲಿ ನಿಲ್ಲಲಿಲ್ಲ. ಗಡ್ಡದವನನ್ನೂ, ದಾನಶೀಲಮಹಾರಾಜನ ಸೈನ್ಯವನ್ನೂ ಸಂಗಡ ಕರೆದುಕೊಂಡು ಮಾಳವ ರಾಜ್ಯವನ್ನು ಸೇರಿಕೊಂಡ. ಆ ನಗರವು ತಳಿರು ತೋರಣಗಳಿಂದ, ಹಸಿರುವಾಣಿಗಳಿಂದ ಕಲಕಲವಾಡುತಿತ್ತು. ಈ ಅಲಂಕಾರವೆಲ್ಲಾ ಏಕೆಂದು ವಿಚಾರಿಸಲು, ಪ್ರತಾಪ ಮಹಾರಾಜರಿಗೆ ಒಂದೇ ಸಾರಿ ಮೂವರು ಮಹಾರಾಣಿಯರು ಬರುವರೆಂದು ಜನ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು.

ಗಡ್ಡದವನು ಹೇಳಿದ ಸೂಚನೆಗಳು ಅಕ್ಷರಶಃ ನಿಜವಾಗುವಂತೆ ತೋರಿತು ಉದಯನನಿಗೆ. ಆಶ್ಚರ್ಯದಿಂದ ಅವರು ಮಹಲನ್ನು ಪ್ರವೇಶಿಸಿದರು. ಮದುವೆ ಮಣೆಯ ಮೇಲೆ ಸಾಲಾಗಿ ಸುಹಾಸಿನಿ, ಸುಭಾಷಿಣಿ, ಸುಕೇಶಿನಿಯರು ಅಲಂಕೃತರಾಗಿ ಕುಳಿತಿದ್ದರು. ಕುಲುಕುಲು ನಗುತ್ತಾ ಪ್ರತಾಪನು ಮೂರು ಮಾಂಗಲ್ಯಸೂತ್ರಗಳನ್ನು ಕೈಯಲ್ಲಿ ಹಿಡಿದುಕೊಂಡಿದ್ದ.

ಉದಯನನು ಉಗ್ರಮೂರ್ತಿಯಾದ. ಒಂದು ಕ್ಷಣದಲ್ಲಿ ಬಾಕು ಹೊರಕ್ಕೆ ತೆಗೆದ. ಆದರೆ ಗಡ್ಡದವನು ಅಡ್ಡ ಬಂದ. ಅಷ್ಟರಲ್ಲಿ ಸೈನ್ಯವೆಲ್ಲಾ ಕೋಟೆಯನ್ನು ಮುತ್ತಿತು. ಪ್ರತಾಪ ಮಹಾರಾಜನ ಕೈಗೆ ಬೇಡಿ ಹಾಕಿದ ಕೂಡಲೇ ಆತನು ವಿವಶನಾಗಿ ನಿಶ್ಚೇಷ್ಟಿತನಾದ. ಇನ್ನು ಮಾಡುವುದಾದರೂ ಏನು? ಕಥೆ ಆಗಲೇ ಅಡ್ಡತಿರುಗಿದೆ.

ಪ್ರತಾಪನು 'ದಾಸೋಽಹಂ' ಎಂದ. ತನ್ನ ತಪ್ಪುಗಳೆಲ್ಲವನ್ನೂ ಒಪ್ಪಿಕೊಂಡ. ಅಪಹರಿಸಿದ್ದ ಅಂಜನ ಮತ್ತು ಭಸ್ಮಗಳನ್ನು ತಂದುಕೊಟ್ಟ. ಒಂದು ಮಾತಿನಲ್ಲಿ ಹೇಳಬೇಕಾದರೆ ಉದಯನ ಮತ್ತು ಗಡ್ಡದವನೊಂದಿಗೆ "ಅಣ್ಣಾ, ಅಪ್ಪಾ, ನಾನು ನಿಮ್ಮ ಸೇವಕ. ನನ್ನ ಸರ್ವಸ್ವವೂ ನಿಮ್ಮದೇ—ಮನ್ನಿಸಿ" ಎಂದು ಕ್ಷಮಾಪಣೆ ಕೇಳಿಕೊಂಡ.



ಎಷ್ಟೋ ಕಷ್ಟಗಳನ್ನು ಪಟ್ಟು, ಆಪತ್ತು ಗಳನ್ನು ಎದುರಿಸಿ, ತಮ್ಮ ಪ್ರಾಣಗಳನ್ನು ರಕ್ಷಿಸುವ ಸಲುವಾಗಿ ತನ್ನ ಜೀವವನ್ನೂ ಅರ್ಪಿಸಲು ಸಿದ್ಧನಾದ ಸಾಹಸಿ ಉದಯನನನ್ನು ಕಂಡ ಕೂಡಲೇ ಆ ಮೂವರು ರಾಜಕುಮಾರಿಯರಿಗೆ ತಾವು ಪ್ರಾಣದಿಂದ ಚೇತರಿಸಿಕೊಂಡಂತಾಯಿತು. ಹಿಡಿಸಲಾರದ ಆನಂದದಿಂದ ಮೂವರೂ ಉದಯನನ ಹತ್ತಿರ ಬಂದು ನಿಂತರು. ಅಪ್ರಯತ್ನವಾಗಿಯೇ ಅವರ ಕಣ್ಣುಗಳಿಂದ ಜೊಳ ಜೊಳನೆಂದು ಆನಂದ ಬಾಷ್ಪಗಳು ಸುರಿಯಿತು.

ಉದಯನನ ಕೈತುಂಡಾಗಿರುವುದನ್ನು ಅವರು ಕೂಡಲೇ ಕಂಡು ಹಿಡಿದರು. ಆ ಗಲಾಟೆಯಲ್ಲಿ ಎಲ್ಲರೂ ಆತನ ಕೈಯ ವಿಷಯ ಮರತೇಬಿಟ್ಟಿದ್ದರು. ಆದರೆ ಗಡ್ಡದವನು ತಟಕ್ಕನೆ ಪಾತಾಳ ಗೃಹಕ್ಕೆ ಹೋಗಿ ಅಲ್ಲಿ ಬಿದ್ದಿದ್ದ ಉದಯನನ ಕೈಯನ್ನು ಸ್ವತಃ ತಂದು, ಅಂಜನಗಳನ್ನು ಪಯೋಗಿಸಿ, ಕೈ ಬರುವಂತೆ ಮಾಡಿದ.

ಮತ್ತೊಂದು ವಿಚಿತ್ರವೇನೆಂದರೆ ರಾಜಕುಮಾರಿಯರನ್ನು ರಾಕ್ಷಸ ಮೂಕರನ್ನಾಗಿ ಮಾಡಿಬಿಟ್ಟಿರಲಿಲ್ಲವೆ? ಆದರೆ ದೇವಿಯ ಕೈಯಿಂದ ಪಕ್ಷಿ ಯಾವಾಗ ಹೋಯಿತೋ ರಾಕ್ಷಸನೂ ಆಗಲೇ ಸತ್ತು ಹೋದ. ರಾಕ್ಷಸನೊಂದಿಗೆ ಅವನು ಪ್ರಯೋಗಿಸಿದ ಮಾಯೆಗಳೂ ಸಹ ಹೋದವು. ಆ ಮಾಯೆಗಳಲ್ಲಿ ಒಂದಾದ ರಾಜಕುಮಾರಿಯರ ಮೂಕತನವೂ ಹೋಯಿತು. ಅವರೀಗ ಎಲ್ಲರಂತೆ ಮಾತನಾಡುತ್ತಿದ್ದಾರೆ.

ಈ ರೀತಿಯಾಗಿ ರಾಜಕುಮಾರಿಯರನ್ನೇ ಅಲ್ಲದೆ ಮಾಳವ ರಾಜ್ಯಲಕ್ಷ್ಮಿಯನ್ನೂ ಸಹ ಸಂಪಾದಿಸಿಕೊಂಡು ಬಂದ ಉದಯನನು ಎಲ್ಲರನ್ನೂ ಕರೆದುಕೊಂಡು ಶ್ರಾವಸ್ತಿ ನಗರದಲ್ಲಿ ಕಾಲಿಟ್ಟನು.

ಗಡ್ಡದವನು ಅಂಜನ ಭಸ್ಮಗಳ ಪ್ರಭಾವದಿಂದ ನಿಶೀಥನ ರುಂಡ ಮುಂಡಗಳನ್ನು ಸೇರಿಸಿ ಉಸಿರಾಡುವಂತೆ ಮಾಡಿದ.

ರಾಜ್ಯದಲ್ಲಿದ್ದ ಪ್ರಜೆಗಳೆಲ್ಲರೂ ಆನಂದ ಸಾಗರದಲ್ಲಿ ಮುಳುಗಿದರು. ರಾಜ ಮತ್ತು ರಾಣಿ "ಅವಳಿ ಸಹೋದರರ ಋಣ ಎಷ್ಟು ಜನ್ಮಕ್ಕೂ ತೀರಿಸಲಾರೆವು" ಎಂದು ಅವರನ್ನು ಕೊಂಡಾಡಿದರು.

ಆಗ ಅವಳಿಮಕ್ಕಳನ್ನು ದಾನಶೀಲಮಹಾರಾಜನು ಹತ್ತಿರ ಕರೆದುಕೊಂಡು, ಸುಹಾಸಿನಿಯ ಕೈಯನ್ನು ಉದಯನನ ಕೈಯಲ್ಲೂ, ಸುಭಾಷಿಣಿಯ ಕೈಯನ್ನು ಸಂಧ್ಯಾಕುಮಾರನ ಕೈಯಲ್ಲೂ, ಸುಕೇಶಿನಿಯ ಕೈಯನ್ನು ಸಿಶೀಥನ ಕೈಯಲ್ಲೂ ಇಟ್ಟನು. ಗುರುವಿಗೆ ಸಮಾನನಾದ ಗಡ್ಡದವನು ಅವರಿಗೆ ಆಶೀರ್ವಾದ ಮಾಡಿದ. ಮೂವರು ಅವಳಿ ಸಹೋದರರಿಗೂ ಮೂವರು ರಾಜಕುಮಾರಿಯರಿಗೂ ಅತಿವೈಭವದಿಂದ ವಿವಾಹವಾಯಿತು.

ತರುವಾಯ ದಾನಶೀಲಮಹಾರಾಜನು ಗಡ್ಡದವನನ್ನು ಮಾಳವದೇಶದ ಅಧಿಪತಿಯಾಗಿ ಇರುವಂತೆ ಕೋರಿದ. ಆದರೆ ಸರ್ವಸಂಗಪರಿತ್ಯಾಗಿ ಯಾಗಿ, ನಿಮಿತ್ತ ಮಾತ್ರದವನಾದ ಗಡ್ಡದವನಿಗೆ ರಾಜ್ಯಗಳೇಕೆ? ಪ್ರತಾಪನು ಮಾಡಿದತಪ್ಪಿಗೆ ಪಶ್ಚಾತ್ತಾಪ ಸೂಚಿಸಲು ಆತನ ರಾಜ್ಯವನ್ನು ಆತನಿಗೇ ಮತ್ತೆ ಕೊಡಿಸಿಕೊಟ್ಟ.

ಮಹಾರಾಜನು ಮೂವರು ಸಹೋದರರಿಗೂ ತನ್ನ ರಾಜ್ಯವನ್ನು ಪಾಲು ಮಾಡಿಕೊಳ್ಳುವಂತೆ ಹೇಳಿದ. ಆದರೆ ಆ ಸಹೋದರರು ಅದಕ್ಕೆ ಆಶೆಪಡಲಿಲ್ಲ. ಸರ್ವಸಮರ್ಥನಾದ ಉದಯನನು ತಾನು ರಾಕ್ಷಸನ ಭವನದಿಂದ ತಂದಿದ್ದ ಮೂರು ಪೊಟ್ಟಿಗಳನ್ನು ಹೊರಗೆ ತೆಗೆದ. ಸ್ವಲ್ಪ ಸ್ವಲ್ಪ ದೂರದಲ್ಲಿ ಬೇರೆಬೇರೆಯಾಗಿ ಗಡ್ಡದವನ ಸಲಹೆಯ ಮೇರೆಗೆ ಅವುಗಳನ್ನು ಮೂರುಕಡೆ ಒಡೆಯಲು, ಅಲ್ಲಿ ಬೆಳ್ಳಿಯಕೋಟೆ, ಬಂಗಾರದಕೋಟೆ, ರತ್ನದಕೋಟೆಗಳು ಮೂರು ಉದ್ಭವಿಸಿದವು. ಸ್ವತಃ ನಿರ್ಮಿಸಿಕೊಂಡ ಆ ಕೋಟೆಗಳಲ್ಲಿ ಅವಳಿಮಕ್ಕಳು ಮೂವರೂ ಸುಖವಾಗಿರುತ್ತಿದ್ದರು.

ಇಷ್ಟು ಅಡಾವಿಡಿಯಲ್ಲೂ ಅವರೊಂದು ವಿಷಯ ಮಾತ್ರ ಮರೆಯಲಿಲ್ಲ. ದುಷ್ಟ ರಾಕ್ಷಸನ ಬಲೆಗೆ ಬಿದ್ದು ಶಿಲಾರೂಪ ಹೊಂದಿದ್ದ ಆ ಪ್ರತಿಮೆಗಳ ವಿಷಯ ಉದಯನನ ಮನಸ್ಸನ್ನು ಬಾಧಿಸುತ್ತಲೇ ಇತ್ತು. ಆ ಮಹಾವೀರರಿಗೆ ಸ್ಮಾರಕ ಚಿಹ್ನೆಯಾಗಿ ಒಂದು ಭವ್ಯ ಭವನವನ್ನು ನಿರ್ಮಿಸಿ, ಆ ಭವನದ ಸುತ್ತಲೂ ಈ ಪ್ರತಿಮೆಗಳನ್ನು ಸ್ತಂಭಗಳಂತೆ ಜೋಡಿಸಿದ.

* * * ಇಲ್ಲಿಗೆ ಈ ಕಥೆ ಮುಗಿಯಿತು * * *






ಪೂರ್ವಕಾಲದಲ್ಲಿ ಅಮರಾವತಿಯಲ್ಲಿ ಒಂದು ಕಲಾಶಾಲೆಯಿತ್ತು. ದೇಶವಿದೇಶಗಳಿಂದ ವಿದ್ಯಾರ್ಥಿಗಳು ಬಂದು ಆ ಶಾಲೆಯಲ್ಲಿ ಚಿತ್ರಕಲೆಯನ್ನು ಅಭ್ಯಾಸ ಮಾಡುತ್ತಿದ್ದರು. ಅಲ್ಲಿದ್ದ ವಿದ್ಯಾರ್ಥಿವೃಂದದಲ್ಲಿ ರತ್ನಘೋಷನೆಂಬ ಬಾಲಕನು ತುಂಬಾ ಅದ್ಭುತರೀತಿಯ ಚಿತ್ರಗಳನ್ನು ಬರೆಯುತ್ತಿದ್ದನು. ಅದನ್ನು ಕಂಡವರೆಲ್ಲಾ "ಈತನು ಮುಂದೆ ಒಬ್ಬ ಪ್ರಚಂಡ ಕಲಾವಿದನಾಗಿ ದೇಶಕ್ಕೆ ಕೀರ್ತಿ ತರುತ್ತಾನೆ" ಎಂದು ಹೇಳುತ್ತಿದ್ದರು.

ಆ ಕಲಾಶಾಲೆಯಲ್ಲೇ ಜಯಪ್ರಭ, ಚಂದ್ರಪ್ರಭರೆಂಬ ಹುಡುಗರೂ ಸಹ ಚಿತ್ರ ಕಲೆಯನ್ನು ಅಭ್ಯಾಸ ಮಾಡುತ್ತಿದ್ದರು. ಜನರೆಲ್ಲ ರತ್ನಘೋಷನನ್ನು ಪ್ರಶಂಸೆ ಮಾಡುತ್ತಿರುವುದನ್ನು ಕಂಡು ಸಹಪಾಠಿಗಳಾದ ಇವರಿಬ್ಬರ ಮನಸ್ಸಿನಲ್ಲಿ ವಿವಿಧಭಾವೋದ್ರೇಕವಾಯಿತು.

ಜಯಪ್ರಭ ಹೊಟ್ಟೆಕಿಚ್ಚಿನವನು. ಎಷ್ಟು ದಿನ ಕಲಿತರೂ ರೇಖೆಗಳನ್ನೆಳೆಯುವುದೇ ಆತನಿಗೆ ಸರಿಯಾಗಿ ಬರಲಿಲ್ಲ. ಇನ್ನು ಚಿತ್ರ ಹಾಕುವುದೇನು ಬಣ್ಣ ಹಾಕುವುದೇನು ಬಂತು? ಸಾವಿರ ಜನ್ಮತಾಳಿದರೂ ತಾನು ರತ್ನಘೋಷನ ಮಟ್ಟಕ್ಕೇರಲು ಅರ್ಹನಲ್ಲವೆಂದು ಮನದಟ್ಟಾಯಿತು ಆತನಿಗೆ. ಆದುದರಿಂದ ಕ್ರಮೇಣ ರತ್ನಘೋಷನ ಮೇಲೆ ಅಸೂಯೆ ಜನಿಸಿತು. ರತ್ನಘೋಷನ ಮೇಲೆ ಅನೇಕ ಅಪನಿಂದೆ, ಆರೋಪಗಳನ್ನು ಹುಟ್ಟಿಸಿ ಪ್ರಚಾರಮಾಡಿ, ಆತನ ಕೀರ್ತಿಯನ್ನು ಕುಂಠಿತಗೊಳಿಸಲು ಸಂಕಲ್ಪಿಸಿದ.

ಅಂದಿನಿಂದ ಯಾವುದೋ ಒಂದು ರೀತಿ ರತ್ನಘೋಷನ ಪ್ರಸ್ತಾಪ ತಂದು "ಅವನ ಕೌಶಲ್ಯವೇನೋ ನನಗೆಲ್ಲಾ ಗೊತ್ತಿದೆಯಪ್ಪಾ. ಆ ಚಿತ್ರ ಮೇಸ್ಟರರೇ ಅವನಿಗಾಗಿ ಬರೆದು ಕೊಟ್ಟಿದ್ದಾರೆ. ಇಲ್ಲದಿದ್ದರೆ ಅವನು ಬರೆಯುತ್ತಿದ್ದನೇ? ಅವನ ಕಲೆ!" ಎಂದು ಹೇಳುವನು. "ಮತ್ತೆ ಅಂಥ ಚಿತ್ರವನ್ನೇ ಮತ್ತೊಂದು ಬರೆಯುವಂತೆ ಹೇಳಿ ನೋಡೋಣ" ಎಂದು ಸವಾಲು ಹಾಕುವನು.

ಪಾಪ! ಎರಡನೆಯವನಾದ ಚಂದ್ರಪ್ರಭನ ರೀತಿ ನೀತಿಯೇ ಬೇರೆ. ಈತನು ಆಗಲೇ ಹೊಸದಾಗಿ ಚಿತ್ರಕಲೆಯನ್ನು ಪ್ರಾರಂ

ಡಿ. ಹರನಾಥ.




ಭಿಸಿದ್ದ. ರತ್ನಘೋಷನ ಚಿತ್ರಕಲೆಯನ್ನು
ಕಂಡಂದೇ ಆತನನ್ನು ತನ್ನ ಗುರುಗಳೆಂದು
ಮನದಲ್ಲಿ ಭಾವಿಸಿದ. ತನ್ನ ಗುರುಗಳ ಚಿತ್ರ
ವನ್ನು ಯಾರಾದರೂ ಪ್ರಶಂಸೆ ಮಾಡಿದರೆ
ಚಂದ್ರಪ್ರಭನಿಗೆ ಆನಂದದಿಂದ ಮೈ ಪುಳಕಿತ
ವಾಗುವುದು. 'ಈ ಜೀವಮಾನದಲ್ಲಿ ನಾನೆಂ
ದಾದರೂ ಗುರುಗಳಷ್ಟು ಕುಶಲನಾಗುವೆನೇ?
ಅವರು ಚಿತ್ರಿಸುವಷ್ಟು ಸೊಗಸಾದ ಚಿತ್ರ
ಗಳನ್ನು ನಾನು ಬರೆಯಬಲ್ಲೆನೇ? ಅವರನ್ನು
ಕೊಂಡಾಡುವಂತೆ ನನ್ನನ್ನೂ ಜನ ಮೆಚ್ಚಿ
ಕೊಳ್ಳುವ ಸುದಿನ ಎಂದಾದರೂ ಬರುವುದೇ?'
ಎಂದು ಮನಸ್ಸಿನಲ್ಲೇ ಪ್ರಶ್ನೆ ಮಾಡಿಕೊಳ್ಳು
ವನು. ತನ್ನ ಗುರುಗಳಿಗೆ ಪ್ರತಿಕೂಲವಾಗಿ
ಮಾಡುವ ದುಷ್ಪ್ರಚಾರ ಕಂಡಾಗಲೆಲ್ಲಾ
ಚಂದ್ರಪ್ರಭನಿಗೆ ಕಸಿವಿಸಿಯಾಗುವುದು.



ಚಂದ್ರಪ್ರಭನು ರತ್ನಘೋಷನ ಚಿತ್ರ
ಗಳನ್ನು ಮನಸ್ಸಿನಲ್ಲಿ ನೆನೆಸಿಕೊಂಡು ಅತಿ
ಶ್ರದ್ಧೆಯಿಂದ ಕೆಲಸ ಮಾಡುವನು. ನಿದ್ರೆ
ಯಲ್ಲೂ ಅವನದೇ ಕನವರಿಕೆ. 'ರತ್ನ
ಘೋಷನ ಚಿತ್ರಕ್ಕೂ ನನ್ನ ಚಿತ್ರಕ್ಕೂ ಎಷ್ಟು
ವ್ಯತ್ಯಾಸವಿದೆ! ಆತನ ಚಿತ್ರದಂತೆ ನಾನು
ಎಂದು ಬರೆಯುವೆನು?' ಎಂದು ತಹತಹ
ಪಡುವನು.

ಕೆಲಕಾಲ ಸಾಧನೆ ಮಾಡಿದಕೂಡಲೇ
ಆತನ ಚಿತ್ರಗಳು ರತ್ನಘೋಷನ ಚಿತ್ರಗಳ
ಮಟ್ಟಕ್ಕೆ ಹತ್ತಿರ ಹತ್ತಿರ ಬರುತ್ತಿದ್ದವು.
ಇಬ್ಬರ ಚಿತ್ರಗಳಲ್ಲೂ ತುಂಬಾ ಹೋಲಿಕೆ
ಕಾಣಬರುತಿತ್ತು. ಇದನ್ನು ಕಂಡು ಚಂದ್ರ
ಪ್ರಭನು ತಾನು ಕೆಲವುದಿನಗಳಲ್ಲೇ ರತ್ನ
ಘೋಷನಂತಹ ಉತ್ತಮ ಕಲಾವಿದನಾಗುವೆ
ನೆಂದು ಧೈರ್ಯ ವಹಿಸಿದ.

ಹೀಗಿರಲು ಒಂದು ಸಾರಿ ಕಲಾಶಾಲೆ
ಯಲ್ಲಿ ಒಂದು ಭಾರಿ ಚಿತ್ರ ಪ್ರದರ್ಶನ ನಡೆ
ಯಿತು. ಆ ಪ್ರದರ್ಶನಕ್ಕೆ ದೇಶವಿದೇಶ
ಗಳಿಂದ ಹೆಸರುವಾಸಿಯಾದ ಕಲಾವಿದರು
ತಮ್ಮ ತಮ್ಮ ಉತ್ತಮ ಚಿತ್ರಗಳನ್ನು ಕಳು
ಹಿಸಿಕೊಟ್ಟಿದ್ದರು. ಈ ಪ್ರದರ್ಶನಕ್ಕೆ ರತ್ನ
ಘೋಷನೂ ಸಹ ಒಂದು ಚಿತ್ರ ಸಿದ್ಧ
ಮಾಡಿದ್ದ. ಚಿತ್ರವೆಲ್ಲಾ ಪೂರ್ತಿ ಆಯಿತು.
ಇನ್ನು ಅದಕ್ಕೆ ತೈಲದಿಂದ ಮೆರುಗು ಕೊಡು
ವುದು ಮಾತ್ರ ಬಾಕಿ ಉಳಿದಿತ್ತು. 'ಈವರೆವಿಗೆ
ರತ್ನಘೋಷನು ಚಿತ್ರಿಸಿದ ಚಿತ್ರಗಳೆಲ್ಲಕ್ಕಿಂ





ತಲೂ ಇದು ಉತ್ತಮವಾದ ಕೃತಿ. ಬಹು ಮಾನ ಆತನಿಗೇ ಕಟ್ಟಿಟ್ಟ ಗಂಟು' ಎಂದು ಜನ ಹೇಳುತ್ತಿದ್ದರು.

ಈ ಚಿತ್ರದಿಂದ ರತ್ನಘೋಷನಿಗೆ ಬಹಳ ಕೀರ್ತಿ ಲಭಿಸುವುದೆಂದು ಜಯಪ್ರಭನಿಗೆ ಅಸೂಯೆ ಉಂಟಾಯಿತು. ತಾನಂತೂ ಅನಾಮಧೇಯ. ಸ್ನೇಹಿತನಿಗೆ ಖ್ಯಾತಿ ಬರುವುದೂ ಸಹಿಸಲಾರ! ಆದುದರಿಂದ ಅಸೂಯಾಪರನಾದ ಜಯಪ್ರಭನು ರತ್ನಘೋಷನು ಮತ್ತೆ ಯಾವುದೋ ಕಾರ್ಯದಲ್ಲಿ ಮಗ್ನನಾಗಿರುವಾಗ ಆತನ ಮನೆಗೆ ಹೋಗಿ ತನ್ನೊಂದಿಗೆ ತಂದಿದ್ದ ದ್ರಾವಕವನ್ನು ರತ್ನಘೋಷನು ಚಿತ್ರಕ್ಕೆ ಹಾಕಬೇಕೆಂದು ಇಟ್ಟಿದ್ದ ತೈಲದಲ್ಲಿ ಬೆರೆಸಿಬಿಟ್ಟ. ರತ್ನಘೋಷನಿಗೆ ಈ ವಿಷಯ ತಿಳಿಯದು. ಅವನು ತೈಲವನ್ನು ಹಾಕಿ ಮೆರುಗುಕೊಟ್ಟು ಚಿತ್ರವನ್ನು ಮುಗಿಸಿದ.

* * *

ಮೂರನೆಯ ದಿನ ಪ್ರದರ್ಶನ ಶಾಲೆ ಜನರಿಂದ ಕಿಕ್ಕಿರಿದಿತ್ತು. ರತ್ನಘೋಷನಿಗೇ ಬಹುಮಾನ ಬರುವುದೆಂದು ನಿಶ್ಚಯಿಸಿಕೊಂಡಿದ್ದ ಜನ ಕುತೂಹಲದಿಂದ ಕಾದಿದ್ದರು. ಪರೀಕ್ಷಾಧಿಕಾರಿಗಳು ಮೊದಲು ರತ್ನಘೋಷನ ಚಿತ್ರಕ್ಕೆ ಕಟ್ಟಿದ್ದ ತೆರೆಯನ್ನು ಉತ್ಸಾಹದಿಂದ ತೆಗೆದರು. ಆದರೆ ಅಲ್ಲಿ ಇದ್ದುದಾದರೂ ಏನು? ಬರೀ ಬಣ್ಣ ಬಣ್ಣಗಳ ಮಚ್ಚೆಗಳು ಇದ್ದುವೇ ಹೊರತು ಚಿತ್ರವಾಗಲಿ, ಆಕಾರವಾಗಲೀ ಇರಲಿಲ್ಲ!




"ಛೆ, ಇದು ರತ್ನಘೋಷನ ಚಿತ್ರವೇ ಅಲ್ಲ." ಎಂದಿತು ಜನ. "ರತ್ನಘೋಷನ ಚಿತ್ರವಾಗಿರಲಾರದು" ಎಂದರು ಪರೀಕ್ಷಕರು. ಆಗ ಅಲ್ಲಿಗೆ ರತ್ನಘೋಷನು ಬಂದ. ನೋಡಿಕೊಂಡ. "ಇಂದಿಗೆ ನನ್ನ ಕೆಲಸ ಮುಕ್ತಾಯವಾದಂತೆಯೇ...." ಎಂದು ನಿಸ್ತೇಜವಾಗಿ ನೆಲದಮೇಲೆ ಕುಸಿದು ಬಿದ್ದ.

ಅಷ್ಟರಲ್ಲಿ ಚಂದ್ರಪ್ರಭ ಕಂಗಾರಾಗಿ ಬಂದ. ಅವನೂ ನೋಡಿದ. "ಇದೇನಿದು? ಹೌದು. ಇದು ರತ್ನನದೇ ಚಿತ್ರ. ಆದರೆ ಹೀಗೇಕಾಯಿತು? ಎಲ್ಲಾ ಕಪಟ, ಮಾಯ, ಮೋಸ. ಆತನು ಚಿತ್ರಿಸುತ್ತಿರುವಾಗ ನಾನು ಕಣ್ಣಾರೆ ಕಂಡಿದ್ದೇನೆ. ಅದೋ ನೋಡಿ, ಅಷ್ಟು ಲಲಿತವಾದ ರೇಖೆಗಳನ್ನು ಹಾಕಬಲ್ಲ ದಿವ್ಯ ಹಸ್ತ ರತ್ನಘೋಷನಿಗೆ ಹೊರತು

ಮತ್ತೆ ಯಾರಿಗಿದೆ ಈ ದೇಶದಲ್ಲಿ? ಏನೋ ಮೋಸ ನಡೆದಿರಬೇಕು. ನಿಜ ಹೊರಬೀಳದೆ ಇರದು. ಸಂಬಂಧಪಟ್ಟ ಅಧಿಕಾರಿಗಳು ಕಂಡು ಹಿಡಿಯಬೇಕು. ಉಚಿತಕ್ರಮ ತೆಗೆದುಕೊಳ್ಳಬೇಕು" ಎಂದು ಪರಿಪರಿ ವಿಧ ಗಳಲ್ಲಿ ವಾದಿಸಿದ.

ಅಧಿಕಾರಿಗಳೂ ಸಹ ರತ್ನಘೋಷನಿಗೆ ಉಂಟಾದ ನಷ್ಟಕ್ಕೆ ಮರುಕಗೊಂಡರು. ಚಿತ್ರದ ಕೆಲವು ಲಲಿತ ರೇಖೆಗಳನ್ನು ಕಂಡು ಮುಗ್ಧರಾದರು. ಆದರೇನು? ಆ ಸ್ಥಿತಿಯಲ್ಲಿದ್ದ ಆತನ ಚಿತ್ರಕ್ಕೆ ಬಹುಮಾನ ಕೊಡಲಾಗ ದೆಂದರು. ತರುವಾಯ ಅಲ್ಲಿದ್ದ ಚಿತ್ರಗಳಲ್ಲೆಲ್ಲಾ ಒಂದು ಮಾತ್ರ ಅವರ ಮೆಚ್ಚುಗೆ ಪಡೆಯಿತು. ಅದು ಯಾರದೋ ಎಂದು ನೋಡಿದರು. ಚಂದ್ರಪ್ರಭನದು ಆ ಚಿತ್ರ. ಆತನಿಗೇ ಬಹು ಮಾನ ಕೊಟ್ಟರು.

ಚಂದ್ರಪ್ರಭನು ಕೂಡಲೇ ಆ ಬಹುಮಾನ ವನ್ನು ರತ್ನಘೋಷನ ಹತ್ತಿರಕ್ಕೆ ತೆಗೆದು ಕೊಂಡು ಹೋಗಿ "ಮಿತ್ರನೇ, ನಿನ್ನ ಕೌಶಲ್ಯ ವೆಂತಹುದೋ ನನಗೆ ತಿಳಿದಿದೆ. ಪ್ರಪಂಚಕ್ಕೆ ತಿಳಿದಿದೆ. ಪರೀಕ್ಷಾಧಿಕಾರಿಗಳಿಗೂ ತಿಳಿದಿದೆ. ಆದರೇನು ಮಾಡಬಲ್ಲೆವು? ಅನಾಹುತ ನಡೆದು ಹೋಗಿದೆ. ಈ ಅನಾಹುತ ನಡೆಯದಿದ್ದ ಪಕ್ಷಕ್ಕೆ ಈ ದೇಶದಲ್ಲೇ ಅಲ್ಲ, ಈ ಪ್ರಪಂಚ ದಲೆಲ್ಲಾ ನಿನ್ನಹೆಸರು ಪ್ರಸಿದ್ಧಿ ಪಡೆಯುತಿತ್ತು. ಈ ಬಹುಮಾನ ನಿನ್ನದೇ ಹೊರತು ನನ್ನದಲ್ಲ. ಅದನ್ನು ಸ್ವೀಕರಿಸಲು ನನಗೆ ಅರ್ಹತೆಯಿಲ್ಲ. ಆದುದರಿಂದ. ನೀನೇ ಅದನ್ನು ತೆಗೆದುಕೊ. ನಾನು ನಿನಗೆ ಎರಡನೆಯವನಾಗಿರುವುದೇ ಗೌರವವೆಂದು ಭಾವಿಸುವೆನು. ನಿನ್ನನ್ನು ಮೀರಿಸಲು ನಾನೂ ಪ್ರಯತ್ನಿಸುತ್ತಿದ್ದೇನೆ. ಆದರೆ ತಿಳುವಳಿಕೆಯಿಂದ, ಸಾಧನೆಯಿಂದ ಮಾತ್ರವೇ ನಿಮ್ಮಂತಹ ಕಲಾವಿದನಾಗು ವೆನೇ ಹೊರತು, ಈ ರೀತಿ ಹೇಯ, ತುಚ್ಛ ಕಾರ್ಯಗಳಿಂದ ಸರ್ವಥಾ ಅಲ್ಲ" ಎಂದು ತನ್ನ ಹೃದಯ ವೇದನೆಯನ್ನು ಹೇಳಿಕೊಂಡ.

ಚಂದ್ರಪ್ರಭನ ಚರ್ಯೆಯನ್ನು ಕಂಡು ಪರೀಕ್ಷಾಧಿಕಾರಿಗಳು ಪೆಚ್ಚಾದರು. "ಈ ಬಾರಿ ಎರಡು ಬಹುಮಾನಗಳನ್ನು ನಿರ್ಣಯಿ ಸುವೆವು. ಚಿತ್ರಕ್ಕೆ ಬಹುಮಾನ ಪಡೆಯಲು ರತ್ನಘೋಷನಾದರೆ, ನಡತೆಗೆ ಬಹುಮಾನ ಪಡೆಯಲು ಚಂದ್ರಪ್ರಭ ಅರ್ಹನು" ಎಂದು ಹೇಳಿ ತಲಾ ಒಂದೊಂದು ಬಹುಮಾನ ಕೊಟ್ಟು ಸನ್ಮಾನ ಮಾಡಿದರು.






ಚೆನ್ನಪಟ್ಟಣದಲ್ಲಿ ನಂಜುಂಡಶಾಸ್ತ್ರಿ ಎಂಬ ಸಂಪನ್ನ ಗೃಹಸ್ಥನಿದ್ದ. ಆತನಿಗ ಉತ್ತರ ಹಿಂದೂಸ್ಥಾನದ ಪುಣ್ಯಕ್ಷೇತ್ರಗಳನ್ನು ನೋಡಿ ಕೊಂಡು ಬರುವ ಅಭಿಲಾಷೆ ಆಯಿತು. ಒಳ್ಳೆಯ ದಿನ ನೋಡಿ, ಖರ್ಚಿಗೆ ಸಾಕಾಗುವಷ್ಟು ಹಣ ತೆಗೆದುಕೊಂಡು ಹೊರಟ. ಪುಣ್ಯಕ್ಷೇತ್ರಗಳನ್ನೂ, ಯಾತ್ರಾಸ್ಥಳಗಳನ್ನೂ ಒಂದೊಂದಾಗಿ ನೋಡಿಕೊಂಡು ಕೊನೆಗೆ ಡೆಲ್ಲಿ ಸೇರಿಕೊಂಡ. "ಈ ಪಟ್ಟಣದಲ್ಲಿ ನೋಡಬೇಕಾದ ಸ್ಥಳ ಯಾವುದು ಸ್ವಾಮಿ?" ಎಂದು ಅಲ್ಲಿದ್ದವರೊಬ್ಬರನ್ನು ಕೇಳಲು, ಅವರು ಒಂದು ದೊಡ್ಡ ಪಟ್ಟಿಯನ್ನೇ ಊದಿ "ಜುಮ್ಮಾ ಮಸೀದಿ ಎಂಬುದೊಂದು ಭವ್ಯವಾದ ಮಸೀತಿಯಿದೆ. ಅದೂ ನೋಡಬೇಕಾದ ಸ್ಥಳ" ಎಂದರು. ನಂಜುಂಡಶಾಸ್ತ್ರಿ 'ಸರಿ' ಎಂದು ಒಂದೊಂದಾಗಿ ನೋಡಿಕೊಂಡು ಕೊನೆಗೆ ಆ ಮಸೀದಿ ಸೇರಿಕೊಂಡ.

ಉತ್ತರ ಹಿಂದೂಸ್ಥಾನದಲ್ಲಿ ಪ್ರತಿಯೊಬ್ಬರೂ ಕಾಲಿಗೆ ಚಡಾವು ಹಾಕಿಕೊಳ್ಳುತ್ತಾರೆ. ಆದರೆ ದಕ್ಷಿಣ ದೇಶದಲ್ಲಿ ಹಾಕಿಕೊಳ್ಳುವವರಿಗಿಂತಲೂ ಹಾಕಿಕೊಳ್ಳದಿರುವರೇ ಹೆಚ್ಚುಮಂದಿ. ನಂಜುಂಡಶಾಸ್ತ್ರಿಗೆ ಎಕ್ಕಡ ಹಾಕಿಕೊಂಡು ಅಭ್ಯಾಸವಿಲ್ಲ. ಆದರೆ ಅಲ್ಲಿ ಎಲ್ಲರ ಕಾಲಿನಲ್ಲೂ ಪಾದರಕ್ಷೆಗಳಿರುವುದನ್ನು ಕಂಡು ತಾನೂ ಸಹ ಒಂದು ಜೊತೆ ಚಡಾವು ತೆಗೆಯಬೇಕೆನ್ನಿಸಿತು. ಆದ್ದರಿಂದ ಒಳ್ಳೇ ಅಂದವಾಗಿರುವ ಒಂದು ಜೊತೆ ಚಡಾವು ಡೆಲ್ಲಿಯಲ್ಲಿ ಕೊಂಡುಕೊಂಡ. ಆ ಚಡಾವು ಹಾಕಿಕೊಂಡು ಜುಂಅಂತ ಜುಮ್ಮಾ ಮಸೀದಿಗೆ ಹೋಗೋಣವೆಂದು ಹೊರಟ. ಮಸೀದಿ ಹೊರಬಾಗಿಲಲ್ಲಿ ಎಲ್ಲರೂ ತಂತಮ್ಮ ಪಾದರಕ್ಷೆಗಳನ್ನು ಕಳಚಿ ಒಳಗೆ ಪ್ರವೇಶಿಸುವುದನ್ನು ನೋಡಿದ ಶಾಸ್ತ್ರಿ. ತಾನೂ ಅದೇರೀತಿ ಮಾಡಿದ.

ಜುಮ್ಮಾ ಮಸೀದಿ ನಿಜವಾಗಿ ನೋಡಬೇಕಾದ ದಿವ್ಯವಾದ ಕಟ್ಟಡ. ಎಷ್ಟೋ ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡಿ ಹಿಂದೆ ಒಬ್ಬ ಡೆಲ್ಲಿ ಚಕ್ರವರ್ತಿ ಅದನ್ನು ಕಟ್ಟಿಸಿದ. ಆ ಮಹಾಭವನವನ್ನು ಕಂಡು ಶಾಸ್ತ್ರಿ ಬೆರಗಾದ. ಅಲ್ಲಿಗೆ ಮುಸಲ್ಮಾ

ತೆಲುಗಿನಿಂದ.



ನರು ಅತಿ ಬೆಲೆ ಬಾಳುವ ವಿವಿಧ ಬಣ್ಣಗಳ ವಸ್ತ್ರಗಳನ್ನು ಧರಿಸಿಕೊಂಡು ಬಂದು, ಮೊಣ ಕಾಲೂರಿ ನಮಾಜು ಮಾಡುತ್ತಿದ್ದಾರೆ. 'ಅಲ್ಲಾಹೋ ಅಕ್ಬರ್' ಎಂಬ ಧ್ವನಿ ಕೇಳಿಸಿತು. ಅವರ ಭಕ್ತಿಗೆ ಶಾಸ್ತ್ರಿ ಮೆಚ್ಚಿಕೊಂಡ.

ಇಷ್ಟರವರೆವಿಗೂ ಎಲ್ಲಾ ಸರಿಯಾಗಿತ್ತು. ಆದರೆ ಇದ್ದಕ್ಕಿದ್ದಂತೆಯೇ ಆತನ ಮನಸ್ಸಿನಲ್ಲಿ ಒಂದು ಸಂಶಯ, ಪ್ರವೇಶಿಸಿತು. ಇಷ್ಟೊಂದು ಜನ ಮುಸಲ್ಮಾನರ ನಡುವೆ ನಾನೊಬ್ಬ ಹಿಂದೂ ಇರುವುದು ಪ್ರಮಾದಕರ ವಲ್ಲವೇ? ಅವರು ತಮ್ಮ ಮಸೀದಿಯಲ್ಲಿ ಹಿಂದೂಗಳು ಪ್ರವೇಶಿಸಿದರೆ ಸುಮ್ಮನಿರುವರೇ?' ಎಂದು.

ಒಂದು ಕ್ಷಣದಲ್ಲೇ ಆ ಭಯವು ವಿಪರೀತ ವಾಗಿ ಶಾಸ್ತ್ರಿ ಭಯದಿಂದ ಕಂಪಿಸಿದ. 'ಯಾರಾದರೂ ತನ್ನನ್ನು ಗುರುತಿಸುವ ಮೊದಲೇ ಇಲ್ಲಿಂದ ಕಾಲು ತೆಗೆಯಬೇಕು' ಎಂದು ಆತನು ಹಿಂತಿರುಗಲು ಅನುವಾದ.

ಅದೇ ಸಮಯಕ್ಕೆ ಆಗಲೇ ಮಸೀದಿಯನ್ನು ಪ್ರವೇಶಿಸಿ ಹೊಸಲಿನ ಹತ್ತಿರ ಚಡಾವುಗಳನ್ನು ಬಿಡುತ್ತಿದ್ದ ಅಜಾನುಬಾಹು ಪಠಾನನೊಬ್ಬನು ಆತನಿಗೆ ಕಾಣಿಸಿದ. ಆ ಪಾಗು, ಆ ಕೆಂಪಾದ ಕಣ್ಣುಗಳು, ಆ ಗಿರಿಜಾ ಮೀಸೆ, ಆ ವಿಶಾಲವಾದ ವಕ್ಷಸ್ಥಳ ಇವುಗಳಿಂದ ಭೂಮಿ ಅದರುವಂತೆ ಹೆಜ್ಜೆ ಹಾಕಿಕೊಂಡು ಬರುತ್ತಿದ್ದ ಆತನನ್ನು ನೋಡಿ ಶಾಸ್ತ್ರಿಯ ಎದೆ ಡವಡವನೆಂದು ಬಡಿದುಕೊಂಡಿತು. ಆ ಪಠಾಣನ ಸೊಂಟಕ್ಕೆ ಒಂದು ಬಾಕು ಬೇರೆ ಸಿಕ್ಕಿಸಿತ್ತು. ಮತ್ತಿನ್ನೇನು ಬೇಕು! ಶಾಸ್ತ್ರಿ ನಡುಗಿಬಿಟ್ಟ. ಒಳಗೆ ಪ್ರವೇಶಿಸುತ್ತಿದ್ದ ಪಠಾಣನ ದೃಷ್ಟಿ ಆಕಸ್ಮಿಕವಾಗಿ ಶಾಸ್ತ್ರಿಯ ಮೇಲೆಬಿತ್ತು. ವಿವರ್ಣವಾಗಿದ್ದ ಶಾಸ್ತ್ರಿಯ ಮುಖ ಕಂಡು ಅವನಿಗೆ ಏನೋ ಅನುಮಾನವುಂಟಾಯಿತು. ಶಾಸ್ತ್ರಿಯ ಕಡೆಯೇ ದೃಷ್ಟಿ ನಿಲ್ಲಿಸಿ ಹೆಜ್ಜೆ ಹಾಕುತ್ತಾ ಒಳಗೆ ಬರುತ್ತಿದ್ದಾನೆ ಪಠಾಣ. ಆ ಪಠಾಣನ ದೃಷ್ಟಿ ತನ್ನ ಮೇಲೆ ಬಿದ್ದುದರಿಂದ ಆ ಬಾಕುವಿಂದ ತನ್ನನ್ನು ತಿವಿದು ಕೊಲ್ಲುವನೇನೋ ಎಂದು ಅನ್ನಿಸಿತು ಶಾಸ್ತ್ರಿಗೆ. ಸರಿ, ಓಡಿದ ಮಹಾದ್ವಾರದ ಹತ್ತಿರ. ಅದನ್ನೆಲ್ಲಾ ಗಮನಿಸುತ್ತಿದ್ದ ಪಠಾಣನಿಗೆ ಅನುಮಾನ ಬಲವಾಯಿತು. ಶಾಸ್ತ್ರಿ ಕಂಗಾಲಾಗಿ ಚಡಾವು





ಗಳನ್ನು ಹಾಕಿಕೊಂಡು ಶಬ್ದಮಾಡುತ್ತಾ ಮೆಟ್ಟಲು ಇಳಿದ. "ಅರೆ, ಬದ್ಮಾಷ್, ಈ ಮದ್ರಾಸಿ ನನ್ನ ಚಡಾವುಗಳನ್ನು ಹಾಕಿಕೊಂಡು ಹೋಗುತ್ತಿದ್ದಾನಲ್ಲಾ! ಚಡಾವು ಕಳ್ಳ. ಇದಕ್ಕೇ ಇರಬಹುದು ಈ ಕಾಫರ್ ಇಲ್ಲಿಗೆ ಬಂದಿದ್ದು" ಎಂದು ಶಾಸ್ತ್ರಿಯ ಹಿಂದೆ ಓಡಿದ ಆ ಪಠಾಣ. ಆ ಚಡಾವುಗಳು ಆ 'ಕಾಫರ್' ನದೇ ಆಗಿರಬಹುದೇನೋ ಎಂಬ ಅಂಶ ಪಠಾಣನಿಗೆ ತೋರಲೇ ಇಲ್ಲ. ಏಕೆಂದರೆ ಮದರಾಸು ಕಡೆಯವರು ಚಡಾವು ಹಾಕಿಕೊಂಡಿದ್ದುದನ್ನು ಆತ ಎಂದೂ ಕಂಡಿರಲಿಲ್ಲ.

ಶಾಸ್ತ್ರಿಯನ್ನು ಹಿಡಿಯಬೇಕೆಂದು ಪಠಾಣನು ನಾಲ್ಕು ಹೆಜ್ಜೆಯಿಟ್ಟು ಮಹಾದ್ವಾರ ಸೇರಿಕೊಂಡ. ಅವನು ತನ್ನನ್ನು ಅಟ್ಟಿಸಿಕೊಂಡು ಬರುತ್ತಿರುವನೆಂದು ಗ್ರಹಿಸಿ, ಶಾಸ್ತ್ರಿ ಆ ದಾರಿಯಲ್ಲಿ ಹೋಗುತ್ತಿದ್ದ ಒಂದು ಟಾಂಗಾದಲ್ಲಿ ಹತ್ತಿ, ಗಾಡಿಯವನೊಂದಿಗೆ "ಬೇಗ ಹೊಡಿ" ಎಂದ. "ಅರೆ, ನಿನ್ನಬಿಡ್ತೇನೆಯೆ?" ಎಂದೆನ್ನುತ್ತ ಪಠಾಣನು ಮತ್ತೊಂದು ಟಾಂಗಾ ಹತ್ತಿ ಶಾಸ್ತ್ರಿಯನ್ನು ಹಿಂಬಾಲಿಸಿದ. ಶಾಸ್ತ್ರಿ ಗಾಡಿಯವನೊಂದಿಗೆ "ಅವನು ನಮ್ಮನ್ನು ಅಟ್ಟಿಸಿಕೊಂಡು ಬರುತ್ತಿದ್ದಾನೆ. ತಪ್ಪಿಸಿಕೊಳ್ಳಬೇಕು. ಬೇಗಹೊಡಿ. ಭಾರಿ ಬಹುಮಾನ ಕೊಡ್ತೇನೆ" ಎಂದ.

"ಅವರನ್ನು ಬಿಡಬೇಡ. ಹಿಡಿಯಬೇಕು. ಒಳ್ಳೆ ಇನಾಮು ಸಿಕ್ಕುತ್ತೆ ನಿನಗೆ. ಹೊಡಿ ಬೇಗ ಗಾಡೀನಾ" ಎಂದು ಪಠಾಣ ತನ್ನ ಟಾಂಗಾದವನೊಂದಿಗೆ ಹೇಳಿದ. ಮುಂದೆ ಶಾಸ್ತ್ರಿ ಟಾಂಗಾ, ಹಿಂದೆ ಪಠಾಣನ ಟಾಂಗಾ ವಾಯುವೇಗದಿಂದ ಓಡುತ್ತಿದ್ದವು. ಒಂದು ಗಂಟೆ ಈ ರೀತಿ ಓಡಿದ ಆ ಕುದುರೆಗಳೆರಡೂ ಸುಸ್ತಾಗಿಬಿಟ್ಟವು.

ಇದು ಸರಿಯಲ್ಲವೆಂದು ಯೋಚಿಸಿ ಪಠಾಣನು ತನ್ನ ಗಾಡಿಯಿಂದ "ಕಳ್ಳ, ಕಳ್ಳ ಗಾಡಿ ನಿಲ್ಲಿಸಿ" ಎಂದು ಅರಚಿದ. ಎದುರಾಗಿ ಬರುತ್ತಿದ್ದವರು ಯಾರೋ ಆ ಕೂಗಾಟ ಕೇಳಿ ಶಾಸ್ತ್ರಿಯ ಗಾಡಿಯನ್ನು ತಡೆದು ನಿಲ್ಲಿಸಿದರು. ಶಾಸ್ತ್ರಿ ಅವರ ಮಧ್ಯ ಸೇರಿಕೊಂಡು "ಶರಣು ಶರಣು, ನನ್ನನ್ನು ಕಾಪಾಡಿ. ನಾನು ತಿಳಿಯದೆ ಮಸೀದಿಯೊಳಗೆ ಹೋದರೆ ಈ ಸಾಯೇಬು ನನ್ನನ್ನು ಕೊಲ್ಲಲು ಅಟ್ಟಿಕೊಂಡು ಬರುತ್ತಿರುವನು" ಎಂದು ಅಳುತ್ತಾ ಹೇಳಿದ.

ಅಲ್ಲಿಗೆ ಬಂದ ಪಠಾಣನು "ಅರೆ, ಆಗಲೇ ಒಂದು ಕಥೆ ಕಟ್ಟಿಬಿಟ್ಟೆಯಲ್ಲೋ. ನನ್ನ ಚಡಾವು ಹಾಕಿಕೊಂಡು ಬಂದು ಮುಳು ಮುಳು ಅಳುತ್ತಾ ಇದ್ದೀಯಾ? ಹೂಂ!" ಎಂದು ಗದರಿಸಿದ. ಶಾಸ್ತ್ರಿ ಪೆಚ್ಚಾಗಿ, "ಏನೂ, ನಿನ್ನ ಚಡಾವೇ? ಇವು ನನ್ನವೇ, ನಿನ್ನೆ ಕೊಂಡುಕೊಂಡೆ" ಎಂದು ತನ್ನ ಪಾದರಕ್ಷೆಗಳ ಕಡೆ ನೋಡಿಕೊಂಡ. ಪಠಾಣನೂ ನೋಡಿದ. ಇಬ್ಬರೂ ಆ ಚಡಾವುಗಳ ಕಡೆ ದೃಷ್ಟಿ ಹರಿಸಿ ತಬ್ಬಿಬ್ಬಾದರು. "ಕ್ಯಾ, ಕ್ಯಾ" ಎಂದು ಗಾಡಿ ನಿಲ್ಲಿಸಿದವರೂ ಸಹ ಆಶ್ಚರ್ಯದಿಂದ ಕೇಳಿದರು.

"ಭಾಯ್, ಇವುಗಳಲ್ಲಿ ಒಂದು ಚಡಾವು ಮಾತ್ರ ನನ್ನದು. ಗಾಬರಿಯಲ್ಲಿ ಯಾರದೋ ಮತ್ತೊಂದು ಚಡಾವು ಹಾಕಿಕೊಂಡು ಬಂದುಬಿಟ್ಟೆ" ಎಂದು ಶಾಸ್ತ್ರಿಯೇ ಮೊದಲು ಮಾತನ್ನಾಡಿದ. ಅದಕ್ಕೆ ಪಠಾಣನು "ಮತ್ತೆ ಯಾರದೂ ಅಲ್ಲ, ಅದು ನನ್ನದೇ. ನನ್ನ ಚಡಾವುಗಳನ್ನು ತುಡುಗು ಮಾಡಲು ಹೋಗಿ, ಗಾಬರಿಯಲ್ಲಿ ಒಂದು ನನ್ನದು, ಮತ್ತೊಂದು ಬೇರೊಬ್ಬರದೂ ಕಳುವು ಮಾಡಿದೆ" ಎಂದ.

"ಸಾಹೇಬರೇ, ಜನಿವಾರ ಹಿಡಿದುಕೊಂಡು ಹೇಳುತ್ತಿದ್ದೇನೆ. ಈ ಚಿಕ್ಕ ಚಡಾವು ನನ್ನದೇಯಪ್ಪಾ—ನೋಡಿ, ನನ್ನ ಕಾಲಿಗೆ ಹೇಗೆ ಸರಿ ಹೊಂದುವುದೋ" ಎಂದು ಸಮಾಧಾನ ಹೇಳಿದ. ಪಠಾಣ ಆಶ್ಚರ್ಯಪಟ್ಟು "ಹಾಗಾದರೆ ನಾನೀಗ ನನ್ನ ಎರಡನೇ ಚಡಾವಿಗಾಗಿ ಮಸೀದಿಯ ವರೆವಿಗೆ ಹೋಗಬೇಕೆಂದಾಯಿತು" ಎಂದ.

"ನೀವು ಮಾತ್ರವೇ ಅಲ್ಲ. ನಾನೂ ಬರಬೇಕು. ಈ ಒಂದು ಚಡಾವಿನಿಂದ ನನಗೆ ಮಾತ್ರವೇನು ಲಾಭ" ಎಂದ ಶಾಸ್ತ್ರಿ.

ಅವರಿಬ್ಬರೂ ಅವರವರ ಟಾಂಗಾದಲ್ಲಿ ಮಸೀದಿಗೆ ಹೋದರು. ಸಾಹೇಬ ತನ್ನ ಎರಡನೇ ಚಡಾವನ್ನು ಹಾಕಿಕೊಳ್ಳುತ್ತಾ "ಶಾಸ್ತ್ರಿ, ಈದಿನ ಯಾರಿಗೂ ಲಾಭವಿಲ್ಲದ ದಂಡದ ಗಿರಾಕಿ ಆಯಿತಯ್ಯಾ" ಎಂದ.

ಶಾಸ್ತ್ರಿ ನಗುತ್ತಾ "ಯಾರಿಗೂ ಲಾಭವಿಲ್ಲವೆಂದರೇನು ಭಾಯ್, ಈ ಟಾಂಗಾದವರಿಗೆ ಅದೃಷ್ಟ ಕುಲಾಯಿಸಲಿಲ್ಲವೇ?" ಎಂದು ಸಲಾಂ ಹಾಕಿ, ತನ್ನ ದಾರಿ ತಾನು ಹಿಡಿದ.





# ತಿಪ್ಪಾ ಭಟ್ಟರ ಮದುವೆ

ಉತ್ಕಲದೇಶವನ್ನು ಒಂದಾನೊಂದು ಕಾಲದಲ್ಲಿ ಉಪೇಂದ್ರವರ್ಮನೆಂಬ ರಾಜನು ಆಳುತ್ತಿದ್ದನು. ಆತನು ತನ್ನ ಭಾವಮೈದುನನಾದ ಭುಜಂಗವರ್ಮನನ್ನು ಸೈನ್ಯಾಧಿಪತಿಯನ್ನಾಗಿ ನೇಮಿಸಿದ್ದನು. ಭುಜಂಗವರ್ಮ ತುಂಬಾ ಕೆಟ್ಟವನು. ದಯದಾಕ್ಷಿಣ್ಯಗಳ ಸೊಲ್ಲೇ ಇಲ್ಲದೆ, ತನ್ನನ್ನು ಅಭಿಮಾನದಿಂದ ನೋಡಿಕೊಳ್ಳುತ್ತಿದ್ದ ರಾಜನನ್ನೇ ಕೊಲೆ ಮಾಡಿ, ಉತ್ಕಲದೇಶದ ಸಿಂಹಾಸನವನ್ನು ಆಕ್ರಮಿಸಿಕೊಂಡನು.

ಈ ಕೃತ್ಯ ನಡೆದ ದಿನ ಯುವರಾಜನಾದ ಅನಂತವರ್ಮನು ನಗರದಲ್ಲಿರಲಿಲ್ಲ. "ನೀನೀಗ ಹೋದೆಯೋ, ಆ ಚಂಡಾಲ ನಿನ್ನನ್ನೂ ಕೊಲೆ ಮಾಡಿಬಿಡುತ್ತಾನೆ" ಎಂದು ಸ್ನೇಹಿತರು ಆತನಿಗೆ ಎಚ್ಚರಿಕೆಕೊಟ್ಟರು. ಆದರಿಂದ ಅನಂತವರ್ಮ ನೆರೆಯ ಊರಿನಲ್ಲಿ ಮಾರುವೇಷದಿಂದ ದಿನ ಕಳೆಯುತ್ತಿದ್ದ.

ಆದರೆ ಭುಜಂಗವರ್ಮನು ಹೇಗಾದರೂ ಮಾಡಿ, ಅನಂತವರ್ಮನನ್ನೂ ಸಹ ಕೊಲೆ ಮಾಡಿಬಿಡಬೇಕೆಂದು ಹುಡುಕಿಸುತ್ತಲೇ ಇದ್ದ.

ಅನಂತವರ್ಮ ಒಂದು ಸಮಯದಲ್ಲಿ ಯುವರಾಜನೇ ಆಗಿದ್ದರೂ, ಈಗ ಕಷ್ಟಪರಿಸ್ಥಿತಿಯಲ್ಲಿದ್ದ. ಅಂದಂದಿನ ಹೊಟ್ಟೆ ಹೊರೆದುಕೊಳ್ಳಲು ಕಷ್ಟಪಡಬೇಕಾಗಿತ್ತು.

ಆತನೊಂದು ದಿನ ಹಣ್ಣು ಕೀಳುವ ಸಲುವಾಗಿ ಅಡವಿಯಲ್ಲಿ ಒಂದು ಮರವನ್ನು ಹತ್ತುವ ಸಮಯಕ್ಕೆ ಕುದುರೆಯ ಗೊರಸಿನ ಧ್ವನಿ ಕೇಳಿಸಿತು. ಆತನು ಮರದ ಮೇಲೆಯೇ ಅವತಿಟ್ಟುಕೊಂಡಿದ್ದ. ಮತ್ತೆ ತುಸ ಹೊತ್ತಿಗೆ ಐವತ್ತು ಜನ ಕಳ್ಳರು ತಮ್ಮ ತಮ್ಮ ಕುದುರೆಗಳ ಮೇಲಿಂದ ಅಲ್ಲಿಗೆ ಬಂದಿಳಿದರು. ಅವರಲ್ಲಿಬ್ಬರು ಆ ಮರದ ಪಕ್ಕದಲ್ಲಿದ್ದ ಒಂದು ಭಾರಿ ಬಂಡೆಯನ್ನು ಒಂದು ಪಕ್ಕಕ್ಕೆ ತಳ್ಳಿಹಾಕಿದರು. ಅದರಡಿ ದೊಡ್ಡದೊಂದು ಸುರಂಗವಿತ್ತು. ಕಳ್ಳರು ಒಬ್ಬೊಬ್ಬರೇ ತಮ್ಮ ಕುದುರೆಗಳಮೇಲೆ ಹೇರಿಕೊಂಡು ಬಂದಿದ್ದ ಧನಕನಕಾದಿವಸ್ತುಗಳನ್ನು ಹೊತ್ತುಕೊಂಡು ಸುರಂಗವನ್ನು ಪ್ರವೇಶಿಸಿದರು. ಕಡೆಯಲ್ಲಿ ಕಳ್ಳರ ನಾಯಕನು ಬಾಯಿಗೆ ಬಟ್ಟೆಯನ್ನು ತುರಕಿದ್ದ ಒಬ್ಬ ತರುಣಿಯನ್ನು ಭುಜದಮೇಲೆ ಹಾಕಿಕೊಂಡು ಒಳಗೆ ಹೋದ.

ಮರದ ಮೇಲೆ ಅವಿತಿಟ್ಟುಕೊಂಡಿದ್ದ ಅನಂತವರ್ಮ ಇದೆಲ್ಲವನ್ನೂ ಗಮನಿಸುತ್ತಲೇ

ಟಿ. ಜಗನ್ನಾಥ, ಉಡಿಪಿ.



ಇದ್ದ. ಮತ್ತೊಂದು ಗಂಟೆ ಹೊತ್ತಿಗೆಲ್ಲಾ ಕಳ್ಳರು ಒಬ್ಬೊಬ್ಬರೇ ಹೊರಗೆ ಬಂದರು. ಆ ಬಂಡೆಯನ್ನು ಯಥಾಪ್ರಕಾರ ಜೋಡಿಸಿ, ಅದರ ಮೇಲೆ ತರಗೆಲೆಗಳನ್ನು ಮುಚ್ಚಿ ತಮ್ಮ ತಮ್ಮ ಕುದುರೆಗಳನ್ನು ಹತ್ತಿ ಹೊರಟು ಹೋದರು.

ಅನಂತವರ್ಮ ಮರದಿಂದ ಇಳಿದು ಬಂದು, ಪೊದೆಯಲ್ಲಿ ನುಗ್ಗಿ, ಆ ಬಂಡೆಯನ್ನು ಒಂದು ಕಡೆಗೆ ತಳ್ಳಿದ. ಕೆಳಗೆ ಆತನಿಗೆ ಮೆಟ್ಟಿಲುಗಳು ಕಾಣಿಸಿದವು. ಆ ಮೆಟ್ಟಿಲುಗಳನ್ನು ಇಳಿಯುತ್ತಿರಲು ಒಂದು ಸುರಂಗ ಕಾಣಿಸಿತು. ಅದು ಬರಬರುತ್ತಾ ವಿಶಾಲವಾಗಿ, ಕೊನೆಗೆ ಆತನು ಒಂದು ಭಾರಿ ಭವನವನ್ನು ಪ್ರವೇಶಿಸಿದ. ಅಲ್ಲೊಂದು ಕೋಣೆಯಲ್ಲಿ ಬಾಲೆಯೊಬ್ಬಳು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಆತನು ಕೂಡಲೇ ಆ ಬಾಲೆಯ ಬಂಧನವನ್ನು ಬಿಡಿಸಿ ನೋಡಲು ಆಕೆ ಮತ್ತೆ ಯಾರೂ ಆಗಿರದೆ ತನ್ನ ತಂದೆಯನ್ನು ಕೊಲೆ ಮಾಡಿದ ಭುಜಂಗವರ್ಮನ ಮಗಳಾದ ಹೇಮಲತೆಯಾಗಿದ್ದಳು. ಆಕೆಯನ್ನು ಕಂಡು ಆತನಿಗೆ ಅಮಿತ ಆಶ್ಚರ್ಯವಾಯಿತು.

ಹೇಮಲತೆ ಅನಂತವರ್ಮನ ಗುರುತು ಕಂಡು ಹಿಡಿಯದಾದಳು. ಆ ಗಡ್ಡ, ಆ ಮಾಸಿದ ಬಟ್ಟೆಗಳನ್ನು ನೋಡಿದರೆ ಯಾರೂ ಆತನನ್ನು ಗುರುತು ಹಿಡಿಯುವಂತಿರಲಿಲ್ಲ. ಆಕೆ ಆತನ ಪಾದಗಳ ಮೇಲೆ ಬಿದ್ದು 'ನನ್ನನ್ನು ಈ ಕಳ್ಳರು ಕಾಳಿಕಾದೇವಿಗೆ ಬಲಿ ಕೊಡಲು ಎತ್ತಿಕೊಂಡು ಬಂದಿದ್ದಾರೆ. ನನ್ನಪಾಲಿನ ದೇವರು ನೀವು. ನನ್ನನ್ನು ಕಾಪಾಡಿ" ಎಂದು ಪ್ರಾರ್ಥಿಸಿದಳು.

'ನನ್ನ ತಂದೆಯನ್ನು ಕೊಂದ ಪಾತಕಿಯ ಮಗಳನ್ನು ರಕ್ಷಿಸಲೇ?' ಎಂದೆನ್ನಿಸಿತು ಅನಂತವರ್ಮನಿಗೆ. ಆದರೆ ಮರುಕ್ಷಣವೇ ಹೇಮಲತೆಯ ದೈನ್ಯಾವಸ್ಥೆಯನ್ನು ಕಂಡು ಮರುಕಗೊಂಡ. 'ಈ ತರುಣಿಯ ತಂದೆ ನನಗೆ ಅಪಕಾರ ಮಾಡಿದನೆಂದು ಈಕೆಯ ವಿಷಯದಲ್ಲಿ ಅನಾದರಣೆ ಮಾಡಕೂಡದು. ಅಷ್ಟೇ ಅಲ್ಲ, ಅಪಕಾರಿಯಾದರೂ ಉಪಕಾರ ಮಾಡಬೇಕೆಂದು ಧರ್ಮಶಾಸ್ತ್ರ ಹೇಳುತ್ತದೆ' ಎಂದು ಅನಂತವರ್ಮ ಆಕೆಯನ್ನು ಸಮಾಧಾನಪಡಿಸಿ, ಕ್ಷಣವಾದರೂ ವಿಳಂಬ ಮಾಡದೆ ಆಕೆಯನ್ನು ಅಲ್ಲಿಂದ ಹೊರಗೆ ಕರೆದುಕೊಂಡು ಬಂದ.

ಹೇಮಲತೆಯೊಂದಿಗೆ ಅನಂತವರ್ಮ ನೆರೆಯೂರಿನಲ್ಲಿ ಒಬ್ಬ ಬ್ರಾಹ್ಮಣರ ಮನೆಯ ಹಿತ್ತಲಲ್ಲಿ ಠಿಕಾಣಿ ಹಾಕಿದ. ತನ್ನ ಪರಿಚಯ ವನ್ನು ಆಕೆಗೆ ಮಾಡಿಕೊಡಲೇ ಇಲ್ಲ. "ನನ್ನನ್ನು ಕರೆದುಕೊಂಡು ಹೋಗಿ ನಮ್ಮ ತಂದೆಗೆ ಒಪ್ಪಿಸಿ. ಆತನು ನಿಮ್ಮನ್ನು ಕೃತಜ್ಞತೆ ಯಿಂದ ಆದರಿಸಿ, ನಿಮಗೆ ಬಹುಮಾನ ಕೊಡುವನು" ಎಂದು ಹೇಳಿದಳು ಹೇಮಲತೆ. ಭುಜಂಗವರ್ಮನು ಕ್ರೂರನಾದ ಸಿಂಹದಂ ತಹಮನುಷ್ಯ. ಅವನ ಹತ್ತಿರ ಹೋಗುವುದೆಂ ದರೆ ಆಪತ್ತನ್ನು ತಾನಾಗಿ ಬಯಸಿ ತಂದು ಕೊಂಡಂತೆ ಆಗುವುದು ಎಂದು ಅಂದುಕೊಂಡ ಅನಂತವರ್ಮ. 'ನಾನು ಹೋಗದಿದ್ದರೆ ಬೇಡ, ಈಕೆಯನ್ನು ತಂದೆತಾಯಿಗಳ ಹತ್ತಿರ ಹೇಗಾದರೂ ಮಾಡಿ ಕಳುಹಿಸಿಕೊಡಬೇಕು' ಎಂದು ನೆನೆಸಿ, 'ಯಾರೊಂದಿಗೆ ಕಳುಹಿಸಲಿ' ಎಂದು ಆಲೋಚಿಸುತ್ತಿದ್ದ.

ಮರುದಿನ ಅನಂತವರ್ಮ ಹಣ್ಣುಗಳಿ ಗಾಗಿ ಅಡವಿಗೆ ಹೋಗಿ ಹಿಂತಿರುಗುವಷ್ಟರಲ್ಲಿ ಆತನು ವಾಸಿಸುತ್ತಿದ್ದ ಮನೆಯಲ್ಲಿ 'ಈ ಹುಡುಗಿ ರಾಜಕುಮಾರಿಯೇ ಇರಬೇಕು. ಈ ತರುಣಿಯನ್ನು ಇವನೇ ಹಾರಿಸಿಕೊಂಡು ಬಂದಿರಬಹುದು. ನಾವು ಗಲಾಟೆ ಮಾಡದೆ ರಾಜನಿಗೆ ಒಪ್ಪಿಸಿದರೆ ಭಾರಿ ಬಹುಮಾನ ಪಡೆಯಬಹುದು' ಎಂದು ಪಿಸಿಪಿಸಿ ಮಾತ ನಾಡಿ ಕೊಳ್ಳುತ್ತಿದ್ದರು.

ಆ ಬ್ರಾಹ್ಮಣನಿಗೆ ತಿಪ್ಪಾ ಭಟ್ಟನೆಂಬ ಮಗನಿದ್ದ. ಅವನು "ಇದೇನಮ್ಮಾ, ಬಹು



ಮಾನ ಅಂತ ಹೇಳುತ್ತಿರುವಿರಿ? 'ನನ್ನ ಮಗ ಳನ್ನು ಹುಡುಕಿ ತಂದು ಕೊಟ್ಟವ್ಯಕ್ತಿಗೆ ಆಕೆ ಯನ್ನೆ ಕೊಟ್ಟು ವಿವಾಹ ಮಾಡುವೆನು, ಅರ್ಧ ರಾಜ್ಯವನ್ನು ಕೊಡುವೆನು' ಎಂದು ಡಂಗೂರ ಸಾರಿಸಿರುವರು ಮಹಾರಾಜರು. ನಿಮಗೆ ತಿಳಿಯದೇ?" ಎಂದು ಕೇಳಿದ. ಈ ಮಾತುಗಳು ಅನಂತವರ್ಮನ ಕಿವಿಯಲ್ಲಿ ಬಿತ್ತು. ಆತನು ಸಂಗತಿ ಸಂದರ್ಭಗಳನ್ನು ಕ್ಷಣ ಮಾತ್ರದಲ್ಲಿ ಗ್ರಹಿಸಿದ.

ಇವರು ಆಶೆ ಪಟ್ಟಿರುವ ವಿಷಯ ಅನಂತ ವರ್ಮ ಅರಿತು "ಅಯ್ಯಾ, ನೀವು ಆ ಹುಡುಗಿಯನ್ನು ಕರೆದುಕೊಂಡು ಹೋಗಿ ರಾಜನಿಗೆ ಒಪ್ಪಿಸಿ, ಆತನಿಂದ ಬಹುಮಾನ ಪಡೆಯಿರಿ, ಕಳ್ಳರು ಆಕೆಯನ್ನು ಅಡವಿಯಲ್ಲಿ ಬಂಧಿಸಿದ್ದರೆ, ಸಂರಕ್ಷಿಸಿ ಕರೆತಂದೆವೆಂದು




ಹೇಳಿ, ನೀವೇ ಆಕೆಯನ್ನು ಬಂಧವಿಮುಕ್ತಳನ್ನಾಗಿ ಮಾಡಿದಂತೆ ಬಣ್ಣಿಸಿ. ನನ್ನ ಸೊಲ್ಲು ಎತ್ತಬೇಡಿ" ಎಂದ.

ಹೇಮಲತೆ ತಂದೆ ಹೊಡೆಯಿಸಿದ್ದ ಡಂಗೂರವನ್ನು ಕೇಳಿದ್ದಳು. ಆಕೆ ಅನಂತವರ್ಮ ಕಣ್ಣಿಗೆ ಬಿದ್ದ ಕೂಡಲೇ ವಿಷಯವೆಲ್ಲವನ್ನೂ ತಿಳಿಸಿ "ಈಗಲೇ ಹೊರಟುಬಿಡುವ. ನೀವಿನ್ನು ತಾಪತ್ರಯ ಪಡಬೇಕಾಗಿಲ್ಲ" ಎಂದಳು.

ಅದಕ್ಕೆ ಅನಂತವರ್ಮನು "ನಾನು ಬರಲಾರೆ. ಈ ಬ್ರಾಹ್ಮಣನು ನನಗೆ ಆಶ್ರಯವನ್ನು ಕೊಟ್ಟು, ಉಪಕಾರ ಮಾಡಿದ್ದಾನೆ. ಆತನಿಗೆ ನಾನು ಪ್ರತ್ಯುಪಕಾರ ಈಗ ಮಾಡಬೇಕು. ಈ ವಿಪ್ರನೊಂದಿಗೆ ನೀನೀಗ ಮನೆಗೆ ಹೋಗಿ ಈತನೇ ನಿನ್ನನ್ನು ಕಾಪಾಡಿದನೆಂದು ನಿಮ್ಮ ತಂದೆಯೊಂದಿಗೆ ತಿಳಿಸಿ, ಈತನನ್ನು ಧನವಂತನನ್ನಾಗಿ ಮಾಡು" ಎಂದ.

ಅನಂತವರ್ಮನನ್ನು ವಿವಾಹವಾಗಬೇಕೆಂದು ಆ ತರುಣಿ ಎಂದೋ ನಿರ್ಧಾರ ಮಾಡಿದ್ದಳು. ಆದರೆ ಆತನು ಈಗ ಏಕೆ ಬರುವುದಿಲ್ಲವೆನ್ನುತ್ತಿರುವನೋ ಆಕೆಗೇನು ಗೊತ್ತು?

ತಿಪ್ಪಾಭಟ್ಟನು ಭುಜಂಗವರ್ಮನ ಸಮಕ್ಷಮದಲ್ಲಿ ಹೇಮಲತೆಯನ್ನು ನಿಲ್ಲಿಸಿ, ದರ್ಪದಿಂದ "ಮಾವಯ್ಯಾ, ಇದೋ ನಿಮ್ಮ ಮಗಳು, ಅಬ್ಬಾ! ಒಬ್ಬರೇ ಇಬ್ಬರೇ? ಐನೂರು ಜನ ಡಕಾಯಿತರನ್ನು ಸೋರೆಕಾಯಿ ಕೊಯ್ದಹಾಗೆ, ತಲೆ ಕಡಿದು ಈಕೆಯನ್ನು ಬಿಡಿಸಿಕೊಂಡು ಬಂದಿದೇನೆ" ಎಂದ.

ರಾಜನೂ, ಆತನ ಆಸ್ಥಾನದಲ್ಲಿದ್ದ ಸಭಿಕರೂ ಅವನ ಡಂಭದ ಮಾತಿಗೆ ಹೊಟ್ಟೆ ಹುಣ್ಣಾಗುವಂತೆ ನಕ್ಕರು. ಮಗಳನ್ನು ಹೇಗೋ ತನ್ನ ಹತ್ತಿರ ತಂದು ಸೇರಿಸಿದನಲ್ಲಾ ಎಂಬ ಸಂತೋಷಕ್ಕೆ ಭುಜಂಗವರ್ಮನು ತಿಪ್ಪಾಭಟ್ಟನ ಕಿವಿಗೆ ರತ್ನದ ಕುಂಡಲಗಳನ್ನು ಹಾಕಿಸಿ ಕಾಶ್ಮೀರ ಶಾಲು ಹೊದಿಸಿ, ಒಂದು ಅಗ್ರಹಾರವನ್ನು ಬಹುಮಾನವಾಗಿ ಕೊಟ್ಟು, "ಆಗಾಗ್ಗೆ ನಮ್ಮ ಆಸ್ಥಾನಕ್ಕೆ ದಯಮಾಡಿಸುತ್ತಿರಬೇಕು" ಎಂದ.

ತಿಪ್ಪಾಭಟ್ಟ "ಮಗಳನ್ನು ಕೊಟ್ಟು ಮದುವೆ ಮಾಡಿ ಅರ್ಧ ರಾಜ್ಯ ಕೊಡುವೆನೆಂದು ಡಂಗೂರ ಸಾರಿಸಿದಿರಿ. ಇದೇನಿದು ಈಗ?" ಎಂದು ರಾಜನನ್ನು ಕೇಳಿಯೇಬಿಟ್ಟ. ಅದಕ್ಕೆ ರಾಜನು "ಮೌಢ್ಯತೆ ಹೋದಮೇಲೆ

ಸುಮುಹೂರ್ತವಿಟ್ಟುಕೊಂಡು ಬನ್ನಿ" ಎಂದು ಆ ಮೂಢನನ್ನು ಒಳ್ಳೆಯ ಮಾತಿನಲ್ಲಿ ಹೇಳಿ ಕಳುಹಿಸಿಕೊಟ್ಟ.

ತಿಪ್ಪಾ ಭಟ್ಟ ಮನೆಗೆ ಬಂದು ತಾಯಿಯೊಂದಿಗೆ "ಅಮ್ಮಾ ಅಮ್ಮಾ, ಮೌಢ್ಯತೆ ಹೋದ ಕೂಡಲೇ ನೀನು ರಾಣಿಯ ಬೀಗತಿಯಾಗುವೆ" ಎಂದು ಅಮಿತೋತ್ಸಾಹದಿಂದ ಹೇಳಿದ. "ಅತ್ತ ಹಾಗೇಅದೆ, ಈಸಾರಿ ನೀನು ಅಲ್ಲಿಗೆ ಹೋದೆಯೋ ಕಾವಲುಗಾರರಿಂದ ಕತ್ತು ಹಿಡಿದು ನೂಕಿಸುತ್ತಾನೆ" ಎಂದಳಾಕೆ.

"ಹಾಗೇನಾದರೂ ನನಗೆ ಮದುವೆ ಮಾಡದಿದ್ದರೆ ಬಾವಿಯಲ್ಲಿ ಬಿದ್ದು ಸಾಯುವೆನು" ಎಂದ ತಿಪ್ಪಾ ಭಟ್ಟ.

"ಲೋ, ಮಗನೇ, ಆ ಹುಡುಗಿ ನಮ್ಮ ಹಿತ್ತಲಲ್ಲಿ ಇರುವ ರಾಜಕುಮಾರನನ್ನು ಹೊರತು ಅನ್ಯರನ್ನು ವಿವಾಹವಾಗುವುದಿಲ್ಲ. ನಾಳೆಯೋ, ನಾಳಿದ್ದೋ ಅವನಿಗಾಗಿ ಹೇಳಿ ಕಳುಹಿಸುವಳು. ಇವನು ಅಲ್ಲಿಗೆ ಹೋದ ಕೂಡಲೇ ನಿಜವರಿತು, ರಾಜನು ಅವನಿಗೆ ತನ್ನ ಮಗಳನ್ನಿತ್ತು ಮದುವೆ ಮಾಡುವನು. ಆದುದರಿಂದ ನೀನು ಆ ಹುಡುಗಿಯ ಆಶೆಯನ್ನು ಬಿಡು. ಅಗ್ರಹಾರ ಬಂತಲ್ಲಾ, ಅಷ್ಟೇ ಸಾಕು" ಎಂದಳು.

ತಿಪ್ಪಾ ಭಟ್ಟ ಒಪ್ಪಿಕೊಳ್ಳಲಿಲ್ಲ. ಈ ರಾಜಕುಮಾರನು ನಿದ್ದೆ ಮಾಡುತ್ತಿರುವಾಗ ಹೊತ್ತುಕೊಂಡು ಹೋಗಿ ಬಾವಿಯಲ್ಲಿ ಹಾಕಿಬಿಡೋಣ. ಇವನ ಕಾಟ ತೊಲಗಿತೆಂದರೆ ಹೇಮಲತೆ ನನ್ನನ್ನಲ್ಲದೆ ಮತ್ತೆ ಯಾರನ್ನು



ಮದುವೆಯಾಗುವಳು?" ಎಂದು ತಂತ್ರ ಹೂಡಿದ.

ಅಂದು ರಾತ್ರಿ ತಾಯಿ ಮತ್ತು ಮಗ ಗಾಢನಿದ್ದೆಯಲ್ಲಿದ್ದ ಅನಂತವರ್ಮನನ್ನು ಹೊತ್ತುಕೊಂಡು ಹೋಗಿ ಹತ್ತಿರದಲ್ಲೇ ಇದ್ದ ಬಾವಿಯಲ್ಲಿ ಹಾಕಿ ಬಂದುಬಿಟ್ಟರು.

ಅಲ್ಲಿ ಹೇಮಲತೆ ತಂದೆಯೊಂದಿಗೆ "ಅಪ್ಪಾ ಅಪ್ಪಾ, ಬ್ರಾಹ್ಮಣನ ಮನೆಯಲ್ಲಿದ್ದಾತ ಯಾರೋ ರಾಜವಂಶಕ್ಕೆ ಸೇರಿದವನೇ ಇರಬೇಕು. ತನ್ನ ವಿಷಯ ಗುಟ್ಟಾಗಿಯೇ ಇಟ್ಟಿದ್ದ. ನನ್ನೊಂದಿಗೇನೂ ಹೇಳಲಿಲ್ಲ" ಎಂದಳು.

ಆ ರಾಜಪುತ್ರನ್ಯಾರೋ ನೋಡಿ ಕರೆದು ತರುವಂತೆ ಭುಜಂಗವರ್ಮ ಸೇನಾಧಿಪತಿಗೆ ಆಜ್ಞಾಪಿಸಿದ. ಆ ಸೇನಾಧಿಪತಿ ಪರಿವಾರದೊಂದಿಗೆ ಬ್ರಾಹ್ಮಣನ ಮನೆಗೆ ಬಂದು

"ನಿಮ್ಮ ಮನೆಯಲ್ಲಿದ್ದ ರಾಜಕುಮಾರನೆಲ್ಲಿ?" ಎಂದು ಕೇಳಲು ಅವರು ಗೊತ್ತಿಲ್ಲವೆಂದರು.

ಜನ ಬಂದ ಗಡಿಬಿಡಿ, ಗಲಾಟೆಯನ್ನು ಕೇಳಿದ ಕೂಡಲೇ ಭಾವಿಯಲ್ಲಿ ಒಂದು ಬಂಡೆಯ ಆಸರೆಯನ್ನು ಹಿಡಿದು ನಿಂತಿದ್ದ ಅನಂತವರ್ಮ ಗಟ್ಟಿಯಾಗಿ ಕೂಗಿದ. ಆಗ ಅವರೆಲ್ಲಾ ಅಲ್ಲಿಗೆ ಹೋಗಿ ಅನಂತವರ್ಮನನ್ನು ಹೊರಕ್ಕೆ ಎಳೆದು "ಇದೇನಿದು? ಬಾವಿಯಲ್ಲಿ ಹೇಗೆ ಬಿದ್ದೆ?" ಎಂದು ಕೇಳಿದರು. ನಿಜವನ್ನೆಲ್ಲಿ ನುಡಿದು ಬಿಡುವನೋ ಎಂದು ತಿಪ್ಪಾ ಭಟ್ಟ ಮತ್ತು ಆತನ ತಾಯಿ ಗಡಗಡನೆ ನಡುಗುತ್ತಿದ್ದರು. ಆದರೆ ಯಾರಿಗೂ ಅಪಕಾರ ಮಾಡುವ ಪ್ರಕೃತಿಯಲ್ಲದ ಅನಂತವರ್ಮ ಯುಕ್ತಿಯಿಂದ "ಕಾಲು ಜಾರಿಬಿದ್ದೆ" ಎಂದು ಹೇಳಿ ಸುಮ್ಮನಿದ್ದುಬಿಟ್ಟ.

ಬರುವುದಿಲ್ಲವೆಂದರೂ ಬಿಡದೆ ಸೇನಾಧಿಪತಿ ಆತನನ್ನು ರಾಜನ ಹತ್ತಿರಕ್ಕೆ ಕರೆದುಕೊಂಡು ಹೋದ. ಅನಂತವರ್ಮನು ಮಾರು ವೇಷದಲ್ಲಿದ್ದರೂ ಸಹ, ಬಂದಾತ ತನ್ನ ಸೋದರಳಿಯನೆಂದು ಕ್ಷಣ ಮಾತ್ರದಲ್ಲಿ ಗ್ರಹಿಸಿದ ಭುಜಂಗವರ್ಮ. ತಾನು ಮಾಡಿದ ದ್ರೋಹಕ್ಕೆ ಪಶ್ಚಾತ್ತಾಪ ಪಟ್ಟ. "ನಡೆದುದನ್ನೆಲ್ಲಾ ಮರೆತುಬಿಡು. ಹೇಮಲತೆಯನ್ನು ವಿವಾಹವಾಗು. ರಾಜ್ಯವನ್ನಾಳು. ನಾನು ಅಡವಿಗೆ ಹೋಗಿ ತಪಸ್ಸು ಮಾಡಿಕೊಳ್ಳುವೆನು" ಎಂದ. ಅನಂತವರ್ಮ ಹೇಮಲತೆಯನ್ನು ವಿವಾಹವಾಗಿ ಪ್ರಜೆಗಳಿಗೆ ಸಮಾಧಾನವಾಗುವಂತೆ ರಾಜ್ಯಭಾರ ಮಾಡುತ್ತಿದ್ದ.

ಒಂದು ದಿನ ಅನಂತವರ್ಮ ಅಡವಿಗೆ ಹೋಗಲು ತಿಪ್ಪಾ ಭಟ್ಟ ಅಳುತ್ತಿದ್ದ ದೃಶ್ಯ ಕಾಣಿಸಿತು. ಅವನನ್ನು ಯಾರೋ ಒಂದು ಮರಕ್ಕೆ ಬಿಗಿದು ಕಟ್ಟಿದ್ದಾರೆ. "ಪ್ರಭೂ, ರಾಜಕುಮಾರಿಯನ್ನು ಸುರಂಗದಿಂದ ಪಾರುಮಾಡಿದವನು ನಾನೇ ಎಂದು ಭಾವಿಸಿ, ಕಳ್ಳರು ಮಧ್ಯರಾತ್ರಿಯಲ್ಲಿ ನಿದ್ದೆಯಲ್ಲಿದ್ದ ನನ್ನನ್ನು ಎಳೆದು ಕೊಂಡು ಬಂದರು. ಈ ಮರಕ್ಕೆ ಕಟ್ಟಿ ಚಿತ್ರವಧೆಮಾಡಲು ಸಿದ್ಧರಾಗಿದ್ದರು. ಅಷ್ಟರಲ್ಲಿ ತಾವು ಬರುವ ಸದ್ದು ಕೇಳಿಸಲು ಪರಾರಿಯಾದರು" ಎಂದು ಹೇಳಿದ ತಿಪ್ಪಾ ಭಟ್ಟ.

ಅನಂತವರ್ಮ ತಿಪ್ಪಾ ಭಟ್ಟನ ಬಂಧನವನ್ನು ಬಿಚ್ಚಿಸಿ, ರಕ್ಷಿಸಿದುದು ಮಾತ್ರವೇ ಅಲ್ಲದೆ, ಸುರಂಗವಿರುವ ಸ್ಥಳವನ್ನು ಹುಡುಕಿ, ಆ ಕಳ್ಳರನ್ನು ಬಂಧಿಸಿ, ಅವರಿಂದ ದೇಶಕ್ಕೆ ಆಗುತ್ತಿದ್ದ ತೊಂದರೆಯನ್ನು ತಪ್ಪಿಸಿದ.






ಹಿಂದೆ ಒಬ್ಬ ಮಾಂತ್ರಿಕನಿದ್ದ. ಆತನು ಹಣ್ಣು ಹಣ್ಣು ಮುದುಕ. ಆ ಊರಿನ ಸಣ್ಣದೊಂದು ಗಲ್ಲಿಯಲ್ಲಿ ಅಂಗಡಿಯಿಟ್ಟುಕೊಂಡು, ಅದರಿಂದ ಬರುತ್ತಿದ್ದ ವರಮಾನದಿಂದ ಜೀವನ ಸಾಗಿಸುತ್ತಿದ್ದ. ಅವನು ಮಾಂತ್ರಿಕನೆಂಬ ವಿಷಯ ಒಬ್ಬ ಹುಡುಗನಿಗೆ ಹೊರತು ಮತ್ತೆ ಯಾರಿಗೂ ತಿಳಿಯದು.

ಆ ಹುಡುಗನಿಗೆ ತಾಯಿ ಇರಲಿಲ್ಲ. ತಂದೆ ಯಾವುದೋ ಕೆಲಸಕ್ಕೆ ಹೋಗುವನು. ಅದರಿಂದ ಏನೂ ಶೋಚದೆ, ಅವನು ಮಾಂತ್ರಿಕನ ಅಂಗಡಿ ನೋಡಿಕೊಳ್ಳುತ್ತಾ ಗಿರಾಕಿಗಳಿಗೆ ಸಾಮಾನುಗಳನ್ನು ಎತ್ತಿಕೊಡುತ್ತಾ ಕಾಲ ನೂಕುವನು.

ಆದರೆ ಮಾಂತ್ರಿಕನು ಒಂದು ವಸ್ತುವನ್ನು ಮಾತ್ರ ಮುಟ್ಟಕೂಡದೆಂದು ನಿಷೇಧಿಸಿದ್ದ. ಅದೊಂದು ವಿಚಿತ್ರವಾದ ತಂಬೂರಿ. ಅಂಗಡಿಗೆ ಬಂದ ಪ್ರತಿಯೊಬ್ಬ ಗಿರಾಕಿಯೂ "ಆ ತಂಬೂರಿ ಎಷ್ಟಕ್ಕೆ ಕೊಡುವೆ?" ಎಂದು ಕೇಳುವನು. "ಅದು ಮಾರಾಟಕ್ಕಿಲ್ಲ" ಎಂದು ಉತ್ತರ ಕೊಡುವನು ಮಾಂತ್ರಿಕ. ಲಕ್ಷ ರೂಪಾಯಿ ಕೊಡುವೆನೆಂದರೂ ಆ ತಂಬೂರಿಯನ್ನು ಮಾತ್ರ ಮುಟ್ಟಗೊಡಿಸುತ್ತಿರಲಿಲ್ಲ.

ಒಂದು ದಿನ ಆ ಹುಡುಗ "ತಾತಾ, ತಾತಾ, ಬೇಕಾದಷ್ಟು ಹಣ ಬರುತ್ತೆ. ಆ ತಂಬೂರಿಯನ್ನು ಮಾರಬಾರದೇಕೆ?" ಎಂದು ಕೇಳಿದ. "ನೀನು ಬೆಳೆದು ದೊಡ್ಡವನಾದ ಮೇಲೆ ಅದನ್ನು ನಿನಗೆ ಕೊಡುತ್ತೇನೆ. ಅದು ದಿವ್ಯವಾದ ಗಾನ ಮಾಡುವುದು. ಆ ಗಾನಕ್ಕೆ ಪ್ರಪಂಚವೆಲ್ಲಾ ತನ್ಮಯತೆ ಹೊಂದಿ ನಿನ್ನ ಕಡೆಯೇ ನೋಡುತ್ತಿರುವುದು" ಎಂದು ಮಾಂತ್ರಿಕನು ತಂಬೂರಿಯನ್ನು ಹಿಡಿದು ಮೀಟಲು ದಿವ್ಯವಾಗಿ ಗಾನ ಕೇಳಿಬಂತು.

ಆದರೆ ಇಂಥ ಇಂಪಾದ ಗಾನ ಎಲ್ಲಿಂದ ಹೇಗೆ ಬರುತ್ತಿದೆ ಎಂದು ಯಾರಿಗೂ ತಿಳಿಯದು. ಆ ತಂಬೂರಿಯ ಒಳಗೆ ಒಬ್ಬ ದೇವಕನ್ಯೆಯನ್ನು ಬಂಧಿಸಿದ್ದ ಮಾಂತ್ರಿಕ. ಆಕೆಯನ್ನು ಈ ರೀತಿ ಬಂಧಿಸಿ ಎಷ್ಟೋ ವರ್ಷಗಳಾದವು. ಅಂದಿನಿಂದ ಮಾಂತ್ರಿಕನಿಗೆ ಹೆದರಿ, ಆತನು ಬೇಕೆಂದಾಗಲೆಲ್ಲಾ ಆಕೆ ಗಾನ ಮಾಡುವಳು. ಆ ದೇವಕನ್ಯೆಗೆ ಈ

ಕೆ. ಗಂಗಾಬಾಯಿ, ಬೊಂಬಾಯಿ.





ಕೊಟ್ಟುಬಿಟ್ಟಿರಾ ತಾತ! ನನ್ನಿಷ್ಟ ಬಂದಂತೆ ಉಪಯೋಗಿಸಲೇ!" ಎಂದು ಮತ್ತೆ ಮತ್ತೆ ಕೇಳಿದ. "ಮಾಡಿಕೊಳ್ಳಯ್ಯಾ, ಅದಕ್ಕೇನು ಅಭ್ಯಂತರವಿದೆ" ಎಂದ ತಾತ.

ಕೂಡಲೇ ಆ ಹುಡುಗ ತಂಬೂರಿ ಕೈಯಲ್ಲಿ ಹಿಡಿದು, ಭುಜಕ್ಕೆ ಒರಗಿಸಿಕೊಂಡು, ತಂತಿ ಮೀಟಿ ಶೃತಿ ಮಾಡಿದ. ಆಗ ತಂಬೂರಿ ಯಿಂದ "ಮಗೂ, ನನ್ನನ್ನು ಈ ಬಂಧನದಿಂದ ಮುಕ್ತಳನ್ನಾಗಿ ಮಾಡು, ನನಗೆ ಪ್ರಿಯವಾದ ಅರಣ್ಯಗಳಿಗೆ ಹೋಗಗೊಡು, ನನ್ನ ಲೋಕ ವನ್ನು ನಾನು ಸೇರಗೊಡು...." ಎಂದು ತುಂಬಾ ಮರುಕದಿಂದ, ದೀನಳಾಗಿ ದೇವ ಕನ್ಯೆ ಹಾಡಿದಳು.

ಹುಡುಗನೆಂದರೆ ಅಮಿತ ಪ್ರೀತಿ. ಆದ್ದರಿಂದ ಅವನು ತಂಬೂರಿಯನ್ನು ಕೈಯಲ್ಲಿ ಹಿಡಿದಾಗ ಲೆಲ್ಲಾ ಅಮೋಘವಾಗಿ ಹಾಡುವಳು. ದೇವ ಕನ್ಯೆ ಮಾಡುವ ಗಾನಕ್ಕೆ ಹುಡುಗನು ಆನಂದ ಬಾಷ್ಪಗಳನ್ನು ಸುರಿಸುವನು.

ಈ ರೀತಿಯಿರುವಲ್ಲಿ ಆ ಹುಡುಗನ ಹುಟ್ಟಿದ ಹಬ್ಬ ಬಂತು. ಆ ದಿನ ಆ ಹುಡು ಗನು ಮಾಂತ್ರಿಕನಿಗೆ ನಮಸ್ಕಾರ ಮಾಡಲು, ಆತನು ಅವನಿಗೆ ಆಶೀರ್ವಾದ ಮಾಡಿ "ಮಗೂ, ನಾನು ನಿನಗೆ ಕೊಡುವೆನೆಂದ ತಂಬೂರಿ ಇದೋ. ಇದನ್ನು ನಿನ್ನ ಇಷ್ಟ ಬಂದಂತೆ ಉಪಯೋಗಿಸಿಕೊ" ಎಂದು ಹೇಳಿ ಅದನ್ನು ಬಹುಮಾನವಾಗಿಕೊಟ್ಟ.

ಅದಕ್ಕೆ ಹುಡುಗನು ಸಂತೋಷದಿಂದ ಉಬ್ಬಿ ಹೋಗಿ "ನಿಜವಾಗಿ ನನಗೇಯೇ

ಆ ಹುಡುಗನು ಮಧ್ಯದಲ್ಲಿ ನಿಲ್ಲಿಸಿ, ಸರ್ರನೆ ಮಾಂತ್ರಿಕನಕಡೆ ತಿರುಗಿ "ತಾತ, ಈ ತಂಬೂರಿ ನನಗೆ ನಿಜವಾಗಿ ಕೊಟ್ಟು ಬಿಟ್ಟೆಯಾ? ದೇವಕನ್ಯೆಯನ್ನು ಬಂಧನದಿಂದ ಬಿಡುಗಡೆ ಮಾಡಬಹುದೇ" ಎಂದು ಆತುರ ದಿಂದ ಕೇಳಿದ. "ತಂಬೂರಿಯಲ್ಲಿ ದೇವಕನ್ಯೆ ಯಿರುವುದೆಂದು ನಿನಗೆ ಹೇಗೆ ಗೊತ್ತು?" ಎಂದು ಕೇಳಿದ ಮಾಂತ್ರಿಕ.

ಅದಕ್ಕೆ ಆ ಬಾಲಕನು "ದೇವಕನ್ಯೆಯ ಮಾತುಗಳು ನನಗೆ ಅನೇಕ ಸಾರಿ ಕೇಳಿ ಸಿದವು. ಈ ಬಂಧನದಿಂದ ಬಿಡುಗಡೆ ಮಾಡಿಸುವಂತೆ ಹಿಂದೇ ಅನೇಕ ಸಾರಿ ಆಕೆ ನನ್ನನ್ನು ಕೇಳಿಕೊಂಡಳು. ಈಗ ಮಾಡುತ್ತಿದ್ದ ಗಾನದಲ್ಲಿ ಅತಿ ದೈನ್ಯತೆಯಿಂದ ಆಕೆ ನನ್ನನ್ನು






ಕೇಳಿಕೊಳ್ಳುತ್ತಿರುವಳು. ಆಕೆಯ ಬಾಧೆಯನ್ನು ಕಂಡು ನಾನಿನ್ನೆಷ್ಟು ಮಾತ್ರವೂ ಸಹಿಸಲಾರೆ. ಈ ತಂಬೂರಿ ನಿಜವಾಗಿ ನನ್ನದೇ ಆದ ಪಕ್ಷಕ್ಕೆ ಈಗಲೇ ಆಕೆಯನ್ನು ಬಿಡುಗಡೆ ಮಾಡುವೆ" ಎಂದು ತನ್ನ ಹೃದಯದಲ್ಲಿನ ಬಯಕೆಯನ್ನು ಬಯಲುಮಾಡಿದ.

ಆಕೆಯನ್ನು ಬಿಡುಗಡೆ ಮಾಡಿದೆಯೆಂದರೆ ನೀನಿನ್ನು ಅಮರಗಾನ ಮಾಡಲಾರೆ. ಆಕೆ ಅದರಲ್ಲಿದ್ದಷ್ಟು ಸಮಯ ನೀನು ಮಾಡುವ ಗಾನ ದಿವ್ಯವಾಗಿರುತ್ತದೆ. ಆ ಗಾನಕ್ಕೆ ತನ್ಮಯತೆ ಹೊಂದಿ, ಪ್ರಪಂಚವೆಲ್ಲಾ ನಿನ್ನ ಪಾದಕ್ರಾಂತವಾಗುವುದು. ಆಕೆಯನ್ನು ಬಿಡುಗಡೆ ಮಾಡಿದಮೇಲೂ ನೀನು ತಂಬೂರಿ ನುಡಿಸಬಹುದು. ಆದರೆ ಆ ಹಾಡು ಭಿಕ್ಷುಕರು ಹಾಡುವ ಹಾಡಿನಂತಿರುವುದು. ದಿವ್ಯ ಗಾನದಿಂದ ಕೀರ್ತಿ, ಅಧಿಕಾರ, ಐಶ್ವರ್ಯ ಎಲ್ಲಾ ಬರುತ್ತದೆ. ಬೇಡವೆಂದರೆ ಬಡತನದಲ್ಲಿ ಬೇಯುವೆ. ಆದುದರಿಂದ ಯಾವ ಮಾರ್ಗ ಬೇಕೋ ಕೇಳಿಕೊ" ಎಂದ ಮಾಂತ್ರಿಕ.

ಆ ಹುಡುಗನು "ಪಾಪ, ದೇವಕನ್ಯೆಯನ್ನು ಇನ್ನು ನಾನು ಬಂಧಿಸಿಡಲಾರೆ" ಎಂದು ತಂಬೂರಿಯನ್ನು ತೆಗೆದು ನೆಲದ ಮೇಲೆ ಒಗೆದ. ತಂಬೂರಿ ಚೂರುಚೂರಾಯಿತು. ಅದರಿಂದ ಒಬ್ಬ ದೇವಕನ್ಯೆ ಪುಟಿದು ಹೊರಗೆ ಬಂದಳು. "ಮಗೂ, ನೀನು ಸುಹೃದಯ. ನನ್ನನ್ನು ಬಂಧವಿಮುಕ್ತಳನ್ನಾಗಿ ಮಾಡಿದೆ. ತುಂಬಾ ಸಂತೋಷವಾಯಿತು. ಈ ತಂಬೂರಿಯಲ್ಲಿ ನಾನಿನ್ನು ಇರಲಾರೆ. ನನ್ನ ಮಹಿಮೆಯಿಂದ ಈವರೆವಿಗೂ ನೀನು ಮಾಡುತ್ತಿದ್ದ ಅಮರಗಾನವನ್ನು ಮುಂದೆ ಮಾಡಲಾರೆ. ಆದರೆ ನಿನ್ನ ಹತ್ತಿರ ಬಂದು ದಿವ್ಯಗಾನಮಾಡುತ್ತಿರುತ್ತೇನೆ ಅದನ್ನು ನೀನು ಬರೆದುಕೊಂಡು ಪುಸ್ತಕ ರೂಪದಲ್ಲಿ ಪ್ರಕಟಿಸಿ ಎಲ್ಲರಿಗೂ ಸಿಗುವಂತೆ ಮಾಡು. ನಿನಗೆ ಕೀರ್ತಿ ಲಭಿಸುವುದು" ಎಂದು ಹೇಳಿ ಅದೃಶ್ಯವಾದಳು.

ಮಾಂತ್ರಿಕನು ಕಿರುನಗೆ ಬೀರುತ್ತಾ ಒಡೆದುಹೋದ ತಂಬೂರಿ ಚೂರುಗಳನ್ನು ಆರಿಸಿ, ಎಲ್ಲವನ್ನೂ ಅಂಟಿಸಿ, ಮಾಮೂಲು ತಂಬೂರಿಯನ್ನಾಗಿ ಮಾಡಿ ಅದನ್ನು ಆ ಹುಡುಗನಿಗೆ ಕೊಟ್ಟು, "ಹೈದಾ, ನಿನ್ನ ತ್ಯಾಗಕ್ಕೆ, ಸಾಹಸಕ್ಕೆ ಮೆಚ್ಚಿದ. ಇದೋ ತಂಬೂರಿ ತೆಗೆದುಕೊ. ಸುಖವಾಗಿ ಬಾಳು" ಎಂದು ಆತನ ಕೈಗೆ ಕೊಟ್ಟು ಮಾಯವಾದ.








## ಮರ್ಯಾದೆಯ ಫಲ

ಪೂರ್ವಕಾಲದಲ್ಲಿ ಗ್ರಾಮವೊಂದರಲ್ಲಿ ಸಂಪನ್ನ ಗ್ರಹಸ್ಥನೊಬ್ಬನಿದ್ದ. ಅತಿಥಿ ಸತ್ಕಾರವೆಂದರೆ ಆತನಿಗೆ ಅಮಿತ ಆಸಕ್ತಿ. ಒಂದು ದಿನ ಅವರ ಮನೆಗೆ ಒಬ್ಬ ಬ್ರಾಹ್ಮಣನು ಅತಿಥಿಯಾಗಿ ಬಂದ. ಉತ್ತಮ ಬ್ರಾಹ್ಮಣನು ತನ್ನ ಮನೆಗೆ ಅತಿಥಿಯಾಗಿ ಬಂದುದಕ್ಕೆ ಆ ಸದ್ಗೃಹಸ್ಥನು ತುಂಬಾ ಆನಂದಗೊಂಡು, ಆತನನ್ನು ಉಚಿತಾಸನದಲ್ಲಿ ಕುಳ್ಳಿರಿಸಿದ. ಬೇಗಬೇಗ ಅಡಿಗೆ ಮಾಡಿಸಿದ.

ಅಡಿಗೆಯಾದ ಕೂಡಲೇ ಆ ಬ್ರಾಹ್ಮಣನನ್ನು ಸ್ನಾನ ಮಾಡುವಂತೆ ಹೇಳಿದ. ಅತಿಥಿ ಮತ್ತು ಗೃಹಸ್ಥ ಇಬ್ಬರೂ ಒಟ್ಟಾಗಿ ಊಟಕ್ಕೆ ಕುಳಿತರು. ಅತಿ ಭಕ್ತಿಯಿಂದ ಆ ಗೃಹಸ್ಥನು ಅತಿಥಿಗೆ ಉಪಚಾರ ಮಾಡುತ್ತಾ "ಸ್ವಾಮಿ, ಸಾವಕಾಶವಾಗಿ ಊಟ ಮಾಡಿ. ಸಂಕೋಚ ಪಡಬೇಡಿ, ಇದು ನಿಮ್ಮ ಮನೆ...." ಎಂದು ಮರ್ಯಾದೆಗಾಗಿ ಭೇಧಭಾವವಿಲ್ಲದೆ ಹೇಳುತ್ತಿದ್ದ. 'ಸ್ವಾಮಿ, ಇದು ನಿಮ್ಮ ಮನೆ' ಎಂದು ಹೇಳಿದಾಗಲೆಲ್ಲಾ, ಆ ಬಂದಿದ್ದ ಅತಿಥಿ ಉದ್ಧರಣೆ ನೀರು ತೆಗೆದು, ಎಲಗೈಯಲ್ಲಿ ಹಾಕಿಕೊಳ್ಳುತ್ತಾ "ಇದಂ ಗೃಹಪತ್ಯಾಜ್ಞಾನುಸಾರೇಣ ಗೃಹದಾನಂ, ಶ್ರೀಮಹಾವಿಷ್ಣುಪ್ರೀತಿಕಾಮಯ ಮಾನಸ್ತುಭ್ಯಮಹಂ ಸಂಪ್ರದೇನಮೆಮನಮಮ" ಎಂದು ತನ್ನ ಕೈಯಲ್ಲಿ ತಾನೇ ಅರ್ಘ್ಯ ಬಿಡುತ್ತಾ ಬಂದ.

ಅತಿಥಿಯಾಗಿ ಬಂದಿದ್ದ ಬ್ರಾಹ್ಮಣ ಆ ಮನೆ ರಿಪೇರಿ ಮಾಡಿಸಲು ಕೆಲ ಜನ ಕೆಲಸಗಾರರನ್ನು ಕರೆದುಕೊಂಡು ಬಂದ. ಇದನ್ನು ಕಂಡು ಆ ಗೃಹಸ್ಥ ಆಶ್ಚರ್ಯಗೊಂಡ. ಇಬ್ಬರಿಗೂ ಘರ್ಷಣೆಯುಂಟಾಗಲು ಅಕ್ಕಪಕ್ಕದ ಜನರು ಸೇರಿದರು. 'ಮರ್ಯಾದೆಗಾಗಿ ಏನೋ ನುಡಿದಿದ್ದಕ್ಕೆ ದ್ರೋಹವೆಣಿಸುವೆಯಾ? ದುರಾಶೆ ಪಿಶಾಚಿ. ಬಹಳ ಸಂತೋಷವಾಯಿತು, ನಿನ್ನ ತಿಳುವಳಿಕೆ ಕಂಡು, ನಡಿ, ನಡಿ," ಎಂದು ಛೀಮಾರಿಹಾಕಿ ಆ ಅತಿಥಿ ಬ್ರಾಹ್ಮಣನನ್ನು ಕಳುಹಿಸಿದ; ಅಂದಿನಿಂದ ಆ ಗೃಹಸ್ಥನು ಅಲಂಕಾರ ಪ್ರಿಯವಾದ ಮಾತುಗಳು ಪ್ರಮಾದಕರವೆಂದು ಮನಗಂಡು ತುಂಬಾ ಜಾಗರೂಕತೆಯಿಂದ ಅವನ್ನು ಉಪಯೋಗಿಸಿ ಮಾತನಾಡುವನು.

ರಂಗರಾಜ

# ಲೋಭಿಯ ಬುದ್ಧಿ

ಒಂದೂರಿನಲ್ಲಿ ಒಬ್ಬ ಜಿಪುಣನಾದ ತುಪ್ಪದ ವ್ಯಾಪಾರಿಯಿದ್ದ. ಅವನು ಮಾರುತ್ತಿದ್ದುದು ಬೆರಕೆ ತುಪ್ಪ. ಆದರೆ ಕಳ್ಳತನ, ಮೋಸ ಎಷ್ಟು ದಿವಸ ತಾನೇ ಸಾಗುತ್ತದೆ? ಒಂದಲ್ಲ ಇನ್ನೊಂದು ದಿನ ಹೊರಗೆ ಬರಲೇ ಬೇಕಲ್ಲವೇ?

ಹೀಗೇ ಇರಲು ಒಂದು ದಿನ ಆ ವರ್ತಕ ಸಿಕ್ಕಿಬಿದ್ದ. ಅವನ ಮೇಲೆ ಮೊಕದ್ದಮೆ ಹೂಡಿದರು. ವಿಚಾರಣೆ ನಡೆಯಿತು.

ನ್ಯಾಯಾಧೀಶರು ತೀರ್ಪು ಕೊಡುತ್ತಾ ಶೆಟ್ಟಿಗೆ ಈ ರೀತಿ ಹೇಳಿದರು. "ನೀನು ಮಾಡಿದ ತಪ್ಪಿಗಾಗಿ ಒಂದು ವೀಸೆ ಬೆರಕೆ ತುಪ್ಪ ಕುಡಿಯಬೇಕು, ಇಲ್ಲ ನೂರು ಚಾವುಟಿ ಏಟು ತಿನ್ನಬೇಕು, ಅದೂ ಆಗದೆಂದರೆ ನೂರು ರೂಪಾಯಿ ದಂಡ ಕೊಟ್ಟರೂ ಸರಿ, ಈ ಮೂರರಲ್ಲಿ ನಿನಗೆ ಯಾವ ಶಿಕ್ಷೆ ಇಷ್ಟವೋ ಅದನ್ನೇವಿಧಿಸುವೆನು" ಎಂದರು.

ಸೊಗುಸಾಗಿದೆ ಈ ವ್ಯವಸ್ಥೆ ಎಂದು ಕೊಂಡ ಸಾಹುಕಾರ. ಚಾವುಟಿ ಏಟು ಯಾರು ತಿನ್ನುತ್ತಾರೆ. ನೋಡುತ್ತಾ ನೋಡುತ್ತಾ ಒಂದಲ್ಲ, ಎರಡಲ್ಲ ನೂರು ರೂಪಾಯಿ ಜುಲ್ಮಾನೆ ಹೇಗೆ ಕೊಡಲಿ? ಆದ್ದರಿಂದ ಹೇಗೋ ಕಣ್ಣು ಮುಚ್ಚಿಕೊಂಡು ಒಂದು ವೀಸೆ ಬೆರಕೆ ತುಪ್ಪ ಕುಡಿದುಬಿಟ್ಟರೆ ಶನಿ ತೊಲಗುವುದು ಎಂದೆಂದುಕೊಂಡು ಮೊದಲನೇ ಷರತ್ತಿಗೆ ಒಪ್ಪಿಕೊಂಡ. ನ್ಯಾಯಾಧೀಶ ಕೂಡಲೇ ಬೆರಕೆ ತುಪ್ಪ ತರಿಸಿದ. ವರ್ತಕನೇನೋ ಸಿದ್ಧನಾದ. ಆದರೆ ತುಪ್ಪ ತಂದು ಕೊಡಲು ಒಂದು ಗುಟುಕು ಕುಡಿಯುವಷ್ಟರಲ್ಲಿ ಹೊಟ್ಟೆ ವಿಕಾರವಾಗಿ ವಾಂತಿ ಮಾಡಿಕೊಂಡ. ಆಗ ಚಾವುಟಿ ಏಟು ತಿನ್ನಲು ಒಪ್ಪಿಕೊಳ್ಳಲು, ನೌಕರರು ಹೊಡೆಯಲು ಪ್ರಾರಂಭಿಸಿದರು. ಆರು ಏಟುಗಳು ಬಿತ್ತೋ ಇಲ್ಲವೋ, ಇನ್ನು ತಡೆಯಲಾರದೆ "ಸ್ವಾಮಿ ಚಾವುಟಿ ಏಟು ಬೇಡ. ಜುಲ್ಮಾನೆ ಕೊಟ್ಟುಕೊಳ್ಳುತ್ತೇನೆ" ಎಂದು ನೂರುರೂಪಾಯಿ ಜುಲ್ಮಾನೆ ಸಲ್ಲಿಸಿ, ಬದುಕಿದೆಯಾಬಡ ಜೀವವೇ ಎಂದು ಹೊರಬಿದ್ದ ನ್ಯಾಯಾಸ್ಥಾನದಿಂದ.

ಈ ರೀತಿ ಲೋಭತನದಿಂದ ಆ ಸಾಹುಕಾರನು ಒಂದು ಶಿಕ್ಷೆಯಿಂದ ಪಾರಾಗಬಹುದಾಗಿದ್ದರೂ ಮೂರು ವಿಧವಾದ ಶಿಕ್ಷೆ ಅನುಭವಿಸಬೇಕಾಗಿ ಬಂತು. ಆದ್ದರಿಂದಲೇ ಲೋಭಿ ಎಲ್ಲ ರೀತಿಯಿಂದಲೂ ಹಾಳಾಗುವನು ಎಂದು ಹೇಳುವರು.





# ಪುಷ್ಪಗಂಧಿ

ಪುಂಡರೀಕಪಟ್ಟಣವನ್ನು ಸಂಪಾತಿ ಎಂಬ ರಾಜನು ಪಾಲಿಸುತ್ತಿದ್ದನು. ಆತನ ರಾಣಿ ಚಂದ್ರರೇಖೆ. ಬಹಳ ವರ್ಷಗಳಾದರೂ ಅವರಿಗೆ ಸಂತಾನ ಪ್ರಾಪ್ತವಾಗದಿರಲು, ರಾಜನು ಅರಣ್ಯಕ್ಕೆ ಹೋಗಿ ಘೋರ ತಪಸ್ಸು ಮಾಡಿದ. ಕೆಲಕಾಲವಾದಮೇಲೆ ಈಶ್ವರನು ಪ್ರತ್ಯಕ್ಷವಾಗಿ "ಎಲೈ ರಾಜನೇ, ನಿನ್ನ ಕೋರಿಕೆ ಸಿದ್ಧಿಸುವುದು, ಹೋಗು" ಎಂದು ಹೇಳಿ ಅಂತರ್ಧಾನ ಹೊಂದಿದ.

ಆ ಪ್ರಕಾರವೇ ಅವರಿಗೆ ಅಪೂರ್ವ ಸೌಂದರ್ಯವುಳ್ಳ ಮಗಳು ಜನಿಸಿದಳು. ಆಕೆಗೆ ಪುಷ್ಪಗಂಧಿ ಎಂದು ನಾಮಕರಣ ಮಾಡಿದರು. ಜೋತಿಷ್ಕರ ಹತ್ತಿರ ಮಗುವಿನ ಜಾತಕ ತೋರಿಸಿದರು. "ಈ ಜಾತಕ ಎಲ್ಲ ವಿಷಯಗಳಲ್ಲೂ ತುಂಬಾ ಶ್ರೇಷ್ಠವಾಗಿದೆ. ಆದರೆ ಒಂದೇ ಒಂದು...." ಎಂದು ಅವರು ಹೇಳುತ್ತಿರುವಲ್ಲಿ ರಾಜನು ದುಗುಡದಿಂದ "ಆದರೆ ಒಂದೇ ಒಂದು ಏನು?" ಎಂದು ಕೇಳಿದ. "ಮದುವೆಯಾದ ಒಂಬತ್ತನೆಯ ದಿನವೇ ಈಕೆಯ ಗಂಡನಿಗೊಂದು ಗಂಡಾಂತರವಿದೆ" ಎಂದರು ಜೋತಿಷ್ಕರು. ಆ ಮಾತು ಕೇಳಿದಾಗಲಿಂದ ರಾಜ ಮತ್ತು ರಾಣಿಯರು ತುಂಬಾ ವ್ಯಾಕುಲಹೊಂದಿದರು.

ಪುಷ್ಪಗಂಧಿಗೆ ಪ್ರಾಪ್ತವಯಸ್ಸು ಬಂತು. ಮಗಳ ಮದುವೆಯ ವಿಷಯ ಕುರಿತು ರಾಣಿ ಪದೇಪದೇ ರಾಜನೊಂದಿಗೆ ಪ್ರಸ್ತಾಪಿಸುವಳು. ಅದಕ್ಕೆ ಸಂಪಾತಿ "ರಾಣೀ, ವಿವಾಹವಾದ ಒಂಬತ್ತನೆಯ ದಿನವೇ ನಮ್ಮ ಪುಷ್ಪಗಂಧಿಗೆ ಮುತ್ತೈದೆತನ ಮುಗಿಯುವುದೆಂದು ಹೇಳಿರುವರು ಜೋತಿಷ್ಕರು. ಮದುವೆ ಮಾಡದೆಯೇ ಇದ್ದುಬಿಟ್ಟರೆ ಆ ಗಂಡಾಂತರ ಅದಷ್ಟಕ್ಕೆ ಅದೇ ತಪ್ಪಿಹೋಗುವುದು. ಅದರಿಂದ ನೀನು ಇನ್ನೊಮ್ಮೆ ಮದುವೆಯ ವಿಷಯ ಪ್ರಸ್ತಾಪಿಸಬೇಡ" ಎಂದ.

ಒಂದು ದಿನ ಪುಷ್ಪಗಂಧಿ ತನ್ನ ಸಖಿಯರೊಂದಿಗೆ ಹೊರಟು ತಮಾಷೆಯಾಗಿ ಅರಣ್ಯದಲ್ಲಿ ಸುತ್ತಾಡಲು ಹೋದಳು. ಆ ಅರಣ್ಯದಲ್ಲಿ ಒಂದು ಕೊಳ ಕಾಣಿಸಲು, ರಾಜಕುಮಾರಿ ಮತ್ತು ಆಕೆಯ ಸಖಿಯರು ಅದರಲ್ಲಿ ಜಲಕ್ರೀಡೆಯಾಡಲು ಪ್ರಾರಂಭಿಸಿದರು.

ಎ. ಯೆಂ. ಜಯ, ಎ. ಯೆಂ. ಸರೋಜ, ಬೆಂಗಳೂರು.



ಅಷ್ಟರಲ್ಲಿ ಒಂದು ಪಕ್ಷಿ ಬಂದು ಆ ಕೊಳದ ದಡದಮೇಲೆ ಬಂದಿತು. ಅದು ಹತ್ತಿರ ಹತ್ತಿರ ಬರುವುದನ್ನು ಕಂಡು ರಾಜಪುತ್ರಿ ಅದನ್ನು ಹಿಡಿಯಲು ಪ್ರಯತ್ನಿಸುತ್ತಿದ್ದಳು.

ಆಕೆ ಆ ಪಕ್ಷಿಯನ್ನು ಹಿಡಿಯಲು ಪ್ರಯತ್ನಿಸುತ್ತಿರುವಾಗ, ಆಪಕ್ಷಿಯನ್ನು ಹಾರಲು ಬಿಟ್ಟ ರಾಜಕುಮಾರ ರತ್ನಮಂಡನನು ಅಲ್ಲಿಗೆ ಬಂದ. ಪಕ್ಷಿಯನ್ನು ಹುಡುಕಲು ಬಂದ ಆತನು ಪುಷ್ಪಗಂಧಿಯ ರೂಪವನ್ನು ಕಂಡು ಪರವಶನಾದ.

ಇತ್ತ ಪಕ್ಷಿಗಾಗಿ ಹೋದ ರತ್ನಮಂಡನನು ಎಷ್ಟು ಹೊತ್ತಾದರೂ ಬಾರದಿರುವುದನ್ನು ಕಂಡು, ಬೇಸರಹೊಂದಿ ಆತನ ಆಪ್ತ ಸಖನಾದ ಇಂದ್ರದತ್ತನು ಆತನನ್ನು ಹುಡುಕುತ್ತಾ ಅಲ್ಲಿಗೆ ಬಂದ. ಪರಿಸ್ಥಿತಿಯನ್ನು ನೋಡಿದ. ಆಗ ರತ್ನಮಂಡನನು "ಅಯ್ಯಾಗೆಳೆಯನೇ, ನಾನು ಆ ಪುಷ್ಪಗಂಧಿಯನ್ನು ಮದುವೆಯಾಗಲೇ ಬೇಕು. ಇಲ್ಲದಿದ್ದರೆ ಜೀವಿಸಿದ್ದು ಫಲವಿಲ್ಲ" ಎಂದ. ಸರಿ ಎಂದೆಂದುಕೊಂಡು ಆ ತರುಣಿಯ ವಿಷಯವನ್ನು ಅರಿಯುವ ಸಲುವಾಗಿ ಆತನು ಹೊರಟ. ತುಸದೂರದಲ್ಲಿ ಒಬ್ಬ ರಾಜಕುಮಾರಿಗೆ ಸಖೀಜನ ನೀರು ಚಿಮುಕಿಸಿ, ಉಪಚಾರ ಮಾಡುತ್ತಿರುವುದು ಆತನ ಕಣ್ಣಿಗೆ ಬಿತ್ತು. "ಆ ತರುಣಿ ಮೂರ್ಛೆ ಹೋಗಲು ಕಾರಣವೇನು?" ಎಂದು ಇಂದ್ರದತ್ತನು ಕೇಳಿದ. "ಏನು ಹೇಳಲಿ, ಅಣ್ಣಾ, ಅಡವಿಯಲ್ಲಿ ಕೊಳದ ದಡದಲ್ಲಿ ಒಬ್ಬ ರಾಜಕುಮಾರನನ್ನು ನೋಡಿದಳು. ತಕ್ಷಣ 'ಆತನೇ ನನ್ನ ಪತಿ' ಎಂದು ಹಠ ಹಿಡಿದು ಕುಳಿತು ಬಿಟ್ಟಳು" ಎಂದು ಹೇಳಿದರವರು.

ಅದಕ್ಕೆ ಇಂದ್ರದತ್ತನು "ಭೇಷ್, ಬಲು ಚೆನ್ನಾಗಿದೆ, ಈ ರಾಜಕುಮಾರಿಗಾಗಿ ನಮ್ಮ ರಾಜಕುಮಾರ ಮುಗ್ಧನಾಗಿಬಿಟ್ಟಿದ್ದಾನೆ. ಆತನಿಗಾಗಿ ನಿಮ್ಮ ರಾಜಕುಮಾರಿ ಮೂರ್ಛೆ ಹೋಗಿದ್ದಾಳೆ. ಸರಿ, ಇದಕ್ಕಿಂತಲೂ ಬೇಕಾದುದಾದರೂ ಏನಿದೆ?" ಎಂದು ಹಿಂತಿರುಗಿದ. ಇಂದ್ರದತ್ತನು ತನ್ನ ಸ್ನೇಹಿತನನ್ನು ಸಂಗಡ ಕರೆದುಕೊಂಡು ತಮ್ಮ ದೇಶವನ್ನು ಸೇರಿದ. ರತ್ನಮಂಡನನ ತಂದೆಯಾದ ನಂದಮಹಾರಾಜನಿಗೆ ವಿಷಯವೆಲ್ಲವನ್ನೂ ತಿಳಿಸಿದ. ಸಂಬಂಧ ಕುದುರಿಸುವಂತೆ ಪ್ರೋತ್ಸಾಹಮಾಡಿದ.



ನಂದಮಹಾರಾಜ ಸಂಪಾತಿಗೆ ಹೇಳಿ ಕಳುಹಿಸಿದ. ಸಂಪಾತಿ ಮುಚ್ಚುಮರೆಯಿಲ್ಲದೆ, ತನ್ನ ಮಗಳು ಅನುಭವಿಸಬೇಕಾದ ಗಂಡಾಂತರವನ್ನು ಯತಾರ್ಥವಾಗಿ ಅರುಹಿದ. ನಂದ ಮಹಾರಾಜ ರತ್ನಮಂಡನನಿಗೆ ಇದೆಲ್ಲಾ ತಿಳಿಸಿ, ಈ ಸಂಬಂಧವನ್ನು ತಪ್ಪಿಸಲು ಯತ್ನಿಸಿದ. ಆದರೆ ಬೇಡವೆಂದಷ್ಟೂ ರತ್ನಮಂಡನನು ಹಠಹಿಡಿದ. ಮತ್ತೇನೂ ಮಾಡಲಾರದೆ ನಂದಮಹಾರಾಜನು ಅಂಗೀಕರಿಸಿದ. ವಿವಾಹ ಅತಿ ವೈಭವವಾಗಿ ನಡೆಯಿತು.

ರತ್ನಮಂಡನನು ಪುಷ್ಪಗಂಧಿಯನ್ನು ಸಂಗಡ ಕರೆದುಕೊಂಡು ರತ್ನಪುರಿಗೆ ಹೋದ. ಮದುವೆಯಾದ ಮೇಲೆ ಎಂಟು ದಿನಗಳು ಎಂಟು ಕ್ಷಣಗಳಾಗಿ ಕಳೆದವು. ಒಂಬತ್ತನೇ ದಿನ ರಾತ್ರಿ ಸುತ್ತಾಡಿಕೊಂಡು ಬರುತ್ತಿದ್ದ ರತ್ನಮಂಡನನು ಅರಮನೆಗೆ ಹಿಂತಿರುಗುತ್ತಿರುವಲ್ಲಿ ಯಾರೋ ಆತನ ಹೆಸರು ಹಿಡಿದು ಕೂಗಿದರು. ಆ ಧ್ವನಿ ಬಂದ ಮರದಕಡೆ ಸರಕ್ಕನೆ ತಿರುಗಿ ನೋಡಲು ಅಲ್ಲೊಂದು ಭಯಂಕರ ವ್ಯಕ್ತಿ ಕಾಣಿಸಿತು. ಉದ್ದವಾದ ಕೋರೆಗಳು, ಗಿರಿಜಾ ಮೀಸೆಗಳೂ, ಭಾರಿ ಹೊಟ್ಟೆ—ಇಂತಹ ಲಕ್ಷಣಗಳುಳ್ಳ ಬ್ರಹ್ಮ ರಾಕ್ಷಸನವನು.

"ಹಸಿವಾಗುತ್ತಿದೆ. ಬೇಗ ಬಾ, ನುಂಗಿ ಬಿಡುತ್ತೇನೆ" ಎಂದು ಗರ್ಜಿಸಿದ ಆ ರಾಕ್ಷಸ. ಆಗ ಜ್ಞಾಪಕಕ್ಕೆ ಬಂತು ರತ್ನಮಂಡನನಿಗೆ ಪುಷ್ಪಗಂಧಿಯ ಜಾತಕದಲ್ಲಿದ್ದ ವಿಷಯ "ಓಹೋ ಇದೇ ಇರಬಹುದು, ದೈವಜ್ಞರು ನುಡಿದ ಗಂಡಾಂತರ. ಏನೋ ಅಂತ ಉಪೇಕ್ಷೆ ಮಾಡಿದ್ದೆ. ಅವರ ಮಾತು ಸತ್ಯವಾಗುವಂತೆ ಕಾಣುವುದು. ಏನು ಮಾಡಲಿ?" ಎಂದು ಮನಸ್ಸಿನಲ್ಲೇ ಪ್ರಶ್ನೆಮಾಡಿಕೊಂಡ.

ಧೈರ್ಯದಿಂದ ರಾಕ್ಷಸನ ಹತ್ತಿರ ಹೋಗಿ "ಅಯ್ಯಾ, ಇದೋ ನಾನು ಬಂದಿದ್ದೇನೆ. ನನ್ನನ್ನು ನುಂಗಿ ನಿನ್ನ ಹಸಿವನ್ನು ಕಡಿಮೆ ಮಾಡಿಕೊ. ಹುಟ್ಟಿದ ಪ್ರತಿ ಜೀವಿಯೂ ಎಂದಾದರೊಂದು ದಿನ ಸಾಯಲೇ ಬೇಕಷ್ಟೆ. ರೋಗರುಜಿನಗಳಿಂದ ಸಾಯುವುದಕ್ಕಿಂತಲೂ ನಿನ್ನಂತಹ ರಾಕ್ಷಸ ರಾಜನಿಗೆ ಆಹುತಿಯಾಗುವುದಕ್ಕೆ ಎಷ್ಟೋ ಪುಣ್ಯ ಕೇಳಿಕೊಂಡು ಬಂದಿರಬೇಕು. ಆದರೆ ನನ್ನದೊಂದು ಪ್ರಾರ್ಥನೆ. ನೀನು ನನ್ನನ್ನು ಹಠಾತ್ತನೆ ಹಿಡಿ

ದಿರುವೆ. ಈಗಲೇ ನನ್ನನ್ನು ಕಬಳಿಸಿದರೆ ನನ್ನನ್ನು ಹೊತ್ತು ಹೆತ್ತ ತಂದೆ ತಾಯಿಗಳಿಗೂ, ಕಟ್ಟಿಕೊಂಡ ಹೆಂಡತಿಗೂ ದ್ರೋಹ ಮಾಡಿದವನಾಗುವೆನು. ಆದುದರಿಂದ ಒಂದು ಗಂಟೆ ಕಾಲಾವಕಾಶ ಕೊಡು, ನನ್ನವರೊಂದಿಗೆ ಹೇಳಿಬಿಟ್ಟು ಬಂದುಬಿಡುವೆನು, ಇದೇ ನನ್ನ ಕೊನೆಯ ಕೋರಿಕೆ" ಎಂದ.

ಸಹಜತಃ ಕ್ರೂರಿಯೇ ಆದರೂ ಆ ರಾಕ್ಷಸನ ಹೃದಯವೂ ಕರಗಿತು. ಏಕೆಂದರೆ ರತ್ನಮಂಡನನು ಹೇಳಿದ ಮಾತುಗಳು ನ್ಯಾಯವಾಗಿವೆ. ಆದರೂ ಅಡ್ಡಿಪಡಿಸೋಣವೆಂದು "ಏನೋ ಸತ್ಯಹರಿಶ್ಚಂದ್ರನಂತೆ ನುಡಿಯುತ್ತಿರುವೆ. ಆದರೆ ಮನೆಗೆ ಹೋದರೆ ಹಿಂತಿರುಗುವುದು ನಿನ್ನ ಕೈಯಲ್ಲಿಲ್ಲ. ಇದೇ ರೀತಿ ಹೇಳಿ ಬಹಳ ಜನ ತಪ್ಪಿಸಿಕೊಂಡು ಹೋಗುತ್ತಿರುತ್ತಾರೆ. ಮಾತು ಉಳಿಸಿಕೊಂಡವರು ಮಾತ್ರ ತುಂಬಾ ಕಡಿಮೆ" ಎಂದು ಎಚ್ಚರಿಕೆ ಕೊಟ್ಟ.

ಅದಕ್ಕೆ ರತ್ನಮಂಡನನು "ಅಯ್ಯಾ, ನಿನಗೆ ಸಂದೇಹವೇಕೆ? ಒಂದುವೇಳೆ ನಾನೀಗ ತಪ್ಪಿಸಿಕೊಂಡು ಹೋದರೂ ಎಂದಾದರೂ ನಿನ್ನ ಕೈಗೆ ಸಿಕ್ಕಲೇಬೇಕಷ್ಟೆ. ಹೀಗಿರುವಾಗ ಮೋಸಮಾಡಿ ಫಲವೇನಿದೆ?" ಎಂದು ಮರುಪ್ರಶ್ನೆಹಾಕಿದ. ರಾಕ್ಷಸನು ಪಕಪಕನೆ ನಕ್ಕು "ಸರಿ, ನೀನು ಹೋಗಿ ಬಾ. 'ಭಿಕ್ಷಕ್ಕೆ ಬಂದ ಅತಿಥಿಯನ್ನು ತಿರಸ್ಕರಿಸಿದವರು ಯಾವ ಪಾಪ ಪಡೆಯುವರೋ, ಮಾತು ತಪ್ಪಿದ




ಪಕ್ಷಕ್ಕೆ ನನಗೂ ಅಂತಹದೇ ಪಾಪ ಸುತ್ತಿಕೊಳ್ಳಲಿ' ಎಂದು ಆಣೆ ಮಾಡಿ ಹೋಗು" ಎಂದ. ಅದೇ ರೀತಿ ಭಾಷೆಯನ್ನು ಕೊಟ್ಟು ರತ್ನಮಂಡನನು ಹೊರಟ. ಮನೆ ಸೇರಿದ. ಎಲ್ಲ ವಿಷಯವನ್ನೂ ವಿಶದವಾಗಿ ತಂದೆ ತಾಯಂದಿರಿಗೆ ತಿಳಿಸಿದ. ಅವರೆಲ್ಲರೂ ಗೊಳೋ ಎಂದು ರೋಧಿಸಿದರು. ಹೋಗಬೇಡವೆಂದು ಕೇಳಿಕೊಂಡರು. "ಮಾತು ಮುರಿಯಲಾರೆ" ಎಂದ ರತ್ನಮಂಡನ.

ಕೊನೆಗೆ ಪುಷ್ಪಗಂಧಿಯ ಹತ್ತಿರ ಬಂದು ತನ್ನ ವಿಷಯ ತಿಳಿಯ ಹೇಳಿದ. ಬುದ್ಧಿವಂತಳಾದ ಪುಷ್ಪಗಂಧಿ ವಿವರಗಳೆಲ್ಲವನ್ನೂ ತಿಳಿದುಕೊಂಡಳು. ಉಳಿದವರಂತೆ ಗಂಡನಿಗೆ ನಿರುತ್ಸಾಹಗೊಳಿಸಲಿಲ್ಲ. ಅತಿ ಧೈರ್ಯದಿಂದ, ಸಂತೋಷದಿಂದ, ಗಂಡನೊಂದಿಗೆ "ನೀವು

ಮಾತು ಮೀರಲಾರದ ಮಾನಧನರು. ಹೋಗಿ ಬನ್ನಿ. ಜಯವಾಗುವುದು" ಎಂದಳು. ಈ ಮಾತುಗಳನ್ನು ಕೇಳಿ ಎಲ್ಲರೂ ಆಶ್ಚರ್ಯಗೊಂಡರು.

ಪುಷ್ಪಗಂಧಿಯ ಮಾತಿಗೆ ರತ್ನಮಂಡನನು ಆನಂದ ಹೊಂದಿದ. ಈ ಜೀವನದಲ್ಲಿ ತಾನು ಯಾವುದೋ ಮಹತ್ಕಾರ್ಯವನ್ನು ನೆರವೇರಿಸು ವೇರಿಸುತ್ತಿರುವಂತೆ ಭಾವಿಸಿದ. ಹೇಳಿದ ಅವಧಿಗೆ ಸರಿಯಾಗಿ ರಾಕ್ಷಸನ ಎದುರು ಹೋಗಿ ನಿಂತ.

"ಸ್ವಾಮಿ ಬಂದೆ. ನಿಮ್ಮ ಹಸಿವನ್ನು ಇಂಗಿಸಿಕೊಳ್ಳಿ" ಎಂದ ರತ್ನಮಂಡನ. ಮಠದ ಮೇಲಿಂದ ಇಳಿದು ಬಂದು ರತ್ನಮಂಡನನ್ನು ಹಿಡಿದು ಕೊಂಡ ರಾಕ್ಷಸ. ಅಷ್ಟರಲ್ಲಿ 'ಭಿಕ್ಷಾಂದೇಹಿ' ಎಂಬ ಮಾತುಗಳು ಕೇಳಿ ಬಂತು. ತಿರುಗಿ ನೋಡಿದ. ಆ ಭಿಕ್ಷೆಕೇಳಿದವರು ಯಾರು? ರತ್ನಮಂಡನನ ಹೆಂಡತಿ ಪುಷ್ಪಗಂಧಿ!

ತನಗೆ ವಿಪರೀತ ಹಸಿವಾಗುತ್ತಿದ್ದರೂ ರಾಕ್ಷಸನು "ತಾಯಿ, ಏನು ಭಿಕ್ಷೆ ಬೇಕು, ನಿಮಗೆ?" ಎಂದು ಕೇಳಿದ. "ಪತಿ ಬಿಕ್ಷೆ" ಎಂದಳಾಕೆ ಅತಿವಿನಯದಿಂದ. ರಾಕ್ಷಸನ್ನ ತಕ್ಷಣ ಅದೃಶ್ಯನಾಗಿ ಆ ಸ್ಥಳದಲ್ಲಿ ಒಬ್ಬ ದಿವ್ಯ ಸುಂದರಾಕಾರನಾದ ಗಂಧರ್ವ ಕಾಣಿಸಿದ.

ಆತನು ರತ್ನಮಂಡನನೊಂದಿಗೆ "ಎಲೈ ರಾಜಕುಮಾರನೇ, ನಿನ್ನ ಪತ್ನಿಗೆ ಪತಿಯ ಗಂಡಾಂತರ ತಪ್ಪಿತು. ನಿಮ್ಮ ಕಷ್ಟಗಳು ಕೊನೆಗೊಂಡವು. ಆಕೆ ನಿನಗೆ ತಕ್ಕ ಮಡದಿ. ಕುಶಾಗ್ರಮತಿ. ನೀನು ಹೇಳಿದ ಮಾತುಗಳಿಂದಲೇ ಅತಿಥಿ ಪೂಜೆಯಲ್ಲಿ ನನಗೆ ದೀಕ್ಷೆಯಿರುವುದೆಂದು ಆಕೆ ಗ್ರಹಿಸಿದಳು. ನಿನ್ನ ಭಾಷೆ ನನಗೆ ವರ್ತಿಸುವಂತೆ ಮಾಡಿ ಪತಿ ಭಿಕ್ಷೆ ಹೊಂದಿದಳು. ನಾನು ಪಾಪ ಮಾಡಿದ ಗಂಧರ್ವ. ಶಾಪವಶದಿಂದ ರಾಕ್ಷಸ ಜನ್ಮ ತಾಳಬೇಕಾಯಿತು. ನಿನ್ನ ಪತ್ನಿಗೆ ಪತಿ ಬಿಕ್ಷೆ ಕೊಟ್ಟ ಕೂಡಲೇ ನನಗೆ ಶಾಪವಿಮೋಚನೆ ಆಯಿತು" ಎಂದು ಹೇಳುವಷ್ಟರಲ್ಲಿ ಮೇಲಿಂದ ಪುಷ್ಪಕವಿಮಾನವೊಂದು ಬಂದು ಗಂಧರ್ವನನ್ನು ಕೊಂಡೊಯ್ದಿತು.

ನೂತನ ದಂಪತಿಗಳು ಮನೆ ಸೇರಿಕೊಂಡು ಸುಖವಾಗಿದ್ದರು.



## ನಗೆಹನಿ

ಗುರು—ಎಲೋ, ನಾಯಿ ತನ್ನ ಬಾಲ ಏಕೆ ಅಲ್ಲಾಡಿಸುತ್ತೆ ಹೇಳು ?

ಶಿಷ್ಯ—ನಾಯಿ ಬಾಲಕ್ಕಿಂತಲೂ ಕಸುವುಳ್ಳದ್ದು. ಆದ್ದರಿಂದ ನಾಯಿ ಬಾಲವನ್ನಲ್ಲಾಡಿಸುತ್ತೆ. ಬಾಲವೇ ನಾಯಿಗಿಂತ ಕಸುವುಳ್ಳದಾಗಿದ್ದರೆ ಅದೇ ನಾಯಿಯನ್ನಲ್ಲಾಡಿಸುತ್ತಿತ್ತು.

—ಭೀಮಸೇನ ಭಾರದ್ವಾಜ.

*　　*　　*

ಗುರು—ಲೋ, ಥೂ, ಚರಂಡಿಯಲ್ಲಿರುವ ನೀರು ಏಕೆ ಕುಡಿಯುತ್ತೀಯೋ ಕಿಟ್ಟಾ !

ಕಿಟ್ಟು—ನೀವೇ ಹೇಳಿದ್ದಿರಲ್ಲಾ ಸಾರ್, 'ನಿಂತಿರುವ ನೀರಿಗಿಂತ ಹರಿಯುವ ನೀರೇ ಉತ್ತಮ' ಎಂದು.

ಜಿ. ನಾಗರಾಜ.

*　　*　　*

ತಂದೆ—ಮಗೂ, ಪರಸ್ತ್ರೀಯರನ್ನು ಯಾವಾಗಲೂ ತಾಯಿಯರಂತೆ ಭಾವಿಸಬೇಕು.

ಮಗ—ನನಗೆ ತಾಯಿಯಾದರೆ ನಿನಗೇನಾದರಪ್ಪಾ?

ಎ. ರಾಮಚಂದ್ರ.

*　　*　　*

ಹೋಟೆಲ್ ಮಾಲಿಕ—ಸಾರ್, ಈ ಕಾಸು ಹೋಗೋಲ್ಲ, ಬೇರೆ ಕೊಡಿ.

ಗಿರಾಕಿ—ನಿಮ್ಮ ಬೋಂಡಾ ಸಹ ನನ್ನ ಗಂಟ್ಲಲ್ಲಿ ಹೋಗ್ಲಿಲ್ಲಾ, ಅದಕ್ಕೇನ್ ಮಾಡೋಣ?

—ಎಸ್. ತಂಗಮ್ಮ.

## ಚುಟುಕಗಳು

1. ಹೊತ್ತಾರೆ ಏಳು  
ಹೆತ್ತವರ್ಮಾತು ಕೇಳು  
ಸತ್ಯ ನೀತಿ  
ವಂತ ನಾಗಿ  
ಹೆಚ್ಚುಕಾಲ ಬಾಳು

2. ಆಡ ಬೇಡ ಸುಳ್ಳು  
ಮಾಡ ಬೇಡ ಗುಲ್ಲು  
ಆಟ ಪಾಠ  
ಕಲಿತು ನೀನು  
ಎಲ್ಲರನ್ನು ಗೆಲ್ಲು

3. ನಾಡಿಗಾಗಿ ಗೇಯು  
ನಾಡಮಾನ ಕಾಯು  
ನಾಡ ಗುಡಿಯು  
ಮೆರೆಸಿ ನೀನು  
ಕೀರ್ತಿಪಡೆದು ಸಾಯು

4. ಚಂದಮಾಮ ಬಂದಿತು  
ಕಂದನ ಅಳು ನಿಂದಿತು  
ಕತೆ, ಹಾಡು,  
ಚಿತ್ರ ಕಂಡು  
ಸಂತೋಷಗೊಂಡಿತು

—ವಿ. ದೇವಪ್ಪ.

5. ಕೈಗೆ ನೀರ ಹಿಡಿ  
ಹಲ್ಲನುಜ್ಜಿ ನಡಿ  
ಮೈಯತೊಳೆದು  
ಹಣೆಗೆ ಬಳೆದು  
ತಿಂಡಿ ಗಿಂಡಿ ಹೊಡಿ.

—ಕುಲಕರ್ಣಿ.

ಇಂದ್ರಜಾಲ

★ PROF. SORCAR ★

## ಪೆಟ್ಟಿಗೆಯಲ್ಲಿ ಮಗು

ಈ ಗಮ್ಮತ್ತು ತುಂಬಾ ವಿಚಿತ್ರವಾಗಿಯೂ, ಆಶ್ಚರ್ಯಕರವಾಗಿಯೂ ಇರುತ್ತದೆ. ಗಾರುಡಿಯವನು ಒಂದು ದೊಡ್ಡ ಪೆಟ್ಟಿಗೆಯನ್ನು ಪ್ರೇಕ್ಷಕರ ಎದುರಾಗಿ ಇರಿಸಿ ಮುಚ್ಚಳ ತೆಗೆದು ತೋರಿಸುತ್ತಾನೆ. ಅದರಲ್ಲಿ ಏನೂ ಕಾಣಿಸುವುದಿಲ್ಲ. ಪ್ರೇಕ್ಷಕರೂ ಸಹ ಅದೊಂದು ಖಾಲಿ ಪೆಟ್ಟಿ ಎಂದು ನಂಬುವರು. ಪೆಟ್ಟಿಗೆಯನ್ನು ಸರಿಯಾಗಿಟ್ಟು, ಮುಚ್ಚಳ ಹಾಕಿ ಮತ್ತೆ ತೆಗೆದರೆ ಆ ಪೆಟ್ಟಿಯಲ್ಲಿ ಒಬ್ಬ ಹುಡುಗಿ ಕುಳಿತುಕೊಂಡಿರುತ್ತಾಳೆ!

ಈ ಯುಕ್ತಿ ಕೇವಲ ನಮ್ಮ ದೇಶದವರ ಸೊತ್ತು. ಇದು ಬಹಳ ಕಾಲದಿಂದ ನಮ್ಮ ದೇಶದಲ್ಲಿ ಪ್ರಚಾರದಲ್ಲಿದೆ. ಬೀದಿಗಳಲ್ಲಿ ಪ್ರದರ್ಶನಮಾಡುವ ದೊಂಬರು ಮರದ ಪೆಟ್ಟಿಗೆಗೆ ಬದಲಾಗಿ ಬಿದಿರಿನ ಬುಟ್ಟಿಯನ್ನು ಉಪಯೋಗಿಸುವರು. ಆದರೆ ವಿದೇಶೀಯರು ರಂಗಸ್ಥಳವನ್ನು ಬಣ್ಣಬಣ್ಣಗಳಿಂದ ಅಲಂಕರಿಸಿ, ಅಂದವಾದ ಪೆಟ್ಟಿಗೆಯನ್ನು ಸಿದ್ಧಪಡಿಸಿ, ಪ್ರೇಕ್ಷಕರು ದಂಗಾಗುವಂತೆ ಆಶ್ಚರ್ಯಕರವಾದ ರೀತಿಯಲ್ಲಿ ಪ್ರದರ್ಶಿಸುತ್ತಿದ್ದಾರೆ.

ಈ ಟ್ರಿಕ್ ಮಾಡುವಾಗ ಹೇಗಿರುವುದೋ ಪಕ್ಕದ ಪೇಜಿನಲ್ಲಿರುವ ಮೊದಲನೇ ಚಿತ್ರದಲ್ಲಿ ನೋಡಬಹುದು. ಇದರ ಗುಟ್ಟುಗಳನ್ನು ಎಷ್ಟೇ ಪ್ರಯತ್ನ ಮಾಡಿದರೂ ಪ್ರೇಕ್ಷಕರು ತಿಳಿಯಲಾರರು. ಆದರೆ ಎರಡನೇ ಚಿತ್ರನೋಡಿದರೆ ಈ ಟ್ರಿಕ್ ಮಾಡುವುದೆಷ್ಟು ಸುಲಭವೋ ತಿಳಿಯುತ್ತದೆ.

ಮೊತ್ತಮೊದಲು ಪೆಟ್ಟಿಗೆ ಮುಚ್ಚಳ ತೆಗೆದು ನೋಡಿದಾಗ ಪೆಟ್ಟಿಗೆ ಖಾಲಿಯಾಗಿ ಕಾಣಿಸಿದರೂ ಅದರ ಹಿಂದೆ ಇರುವ ಒಂದು ಹಲಗೆಯ ಮೇಲೆ ಹುಡುಗಿಯೊಬ್ಬಳು ಮಲಗಿರುತ್ತಾಳೆ. ಪ್ರೇಕ್ಷಕರಿಗೆ ಕಾಣಿಸುವ ಪೆಟ್ಟಿಗೆಯ

ಕೆಳಗಿನ ಹಲಗೆ ಮಾತ್ರವೇ ಅಲ್ಲದೆ ಅದೇ ಅಳತೆಯುಳ್ಳ ಮತ್ತೊಂದು ಹಲಗೆ (2, 3, 4, 5) ಇರುತ್ತದೆ. ಇದು ಪೆಟ್ಟಿಯ ಕೆಳಗಿನ ಹಲಗೆಯೊಂದಿಗೆ ಸೇರಿಸಲ್ಪಟ್ಟು, ಕೀಲಿ ಇಟ್ಟು ಮೇಲೆ ಕೆಳಗೆ ಆಡಿಸಬಹುದು. ಅದೇ ಪ್ರಕಾರ ಹಿಂದುಗಡೆಯ ಹಲಗೆ (1, 2, 5, 6) ಸಹ ಮೇಲೆ ಕೆಳಗೆ ಆಡಿಸಲು ಅನುಕೂಲವಾಗಿರುವುದು.

ಪ್ರೇಕ್ಷಕರು ಪೆಟ್ಟಿ ಖಾಲಿಯಿರುವುದೆಂದು ಒಪ್ಪಿಕೊಂಡ ಕೂಡಲೇ ಜಾದುಗಾರನು ಪೆಟ್ಟಿಗೆಯ ಮುಚ್ಚಳವನ್ನು ಮತ್ತೆ ಮುಚ್ಚಿಬಿಟ್ಟು 1, 2, 5, 6 ಗುರುತಿರುವ ಹಲಗೆ ಕೆಳಗೆ ಬರುವಂತೆ ಪೆಟ್ಟಿಗೆಯನ್ನು ಬಗ್ಗಿಸುತ್ತಾನೆ. ಆಗ ಆ ಹಲಗೆ ಮೇಲಕ್ಕೆ ಬರುತ್ತದೆ. ಅದರ ಸ್ಥಳದಲ್ಲಿ 2, 3, 4, 5 ಗುರುತಿರುವ ಹಲಗೆ ಇರುತ್ತದೆ. ಅಂದರೆ ಆ ಹಲಗೆಯ ಮೇಲೆ ಮಲಗಿರುವ ಹುಡುಗಿ ಸಹ ಹಲಗೆಯೊಂದಿಗೆ ಪೆಟ್ಟಿಯೊಳಗೆ ಬರುವಳೆಂದಾಯಿತು. ಈಗ ಮುಚ್ಚಳ ತೆಗೆದಕೂಡಲೇ ಆಕೆ ಹೊರಗೆದ್ದು ಬರುವಳು.

ಒಂದು ಮುಖ್ಯವಾದ ವಿಷಯ; ಪೆಟ್ಟಿಗೆಯಲ್ಲಿಟ್ಟದ್ದ ಹುಡುಗಿ ಸ್ವಲ್ಪವೂ ಕದಲಾಡಬಾರದು. ಮೊದಲು ಆ ಪೆಟ್ಟಿಗೆಯಲ್ಲಿ ಮಲಗಿಸಿದಾಗ ಕದಲದೆ ಹೇಗೆ ಮಲಗಿದ್ದಳೋ, ಹಾಗೇ ಈ ಪ್ರದರ್ಶನ ಮುಗಿಯುವವರೆವಿಗೂ ಸ್ವಲ್ಪವೂ ಕದಲಬಾರದು. ಪೆಟ್ಟಿಗೆಯನ್ನು ಮೇಲೆಕ್ಕೆ ಎತ್ತುವುದೂ, ಓರೆಯಾಗಿಡುವುದು, ಮೊದಲಾದ ಕೆಲಸಗಳನ್ನು ಗಾರಡಿಯವನೂ, ಆತನ ಅನುಚರರೇ ಮಾಡಿಕೊಳ್ಳುವರು. ತರುವಾಯ ಪೆಟ್ಟಿಗೆಯನ್ನು ಮತ್ತೆ ಸರಿಯಾಗಿ ನಿಲ್ಲಿಸಿ ಒನ—ಟೂ—ತ್ರೀ—ಎಂದು ಮುಚ್ಚಳ ತೆಗೆಯಲು ಹುಡುಗಿ ಹೊರಕ್ಕೆ ಬರುವುದನ್ನು ಕಂಡು ಪ್ರೇಕ್ಷಕರು ವಿಸ್ಮಯಗೊಳ್ಳುವರು.



1 - ನೇ ಬೊಂಬೆ



2 - ನೇ ಬೊಂಬೆ

ಪಾಠಕರು ಈ ಗಾರುಡಿಯನ್ನು ಕುರಿತು ಇನ್ನೂ ವಿವರಗಳನ್ನು ತಿಳಿದುಕೊಳ್ಳಬೇಕೆಂದರೆ, ಅವರು 'ಚಂದಮಾಮದ' ಹೆಸರು ಸೂಚಿಸಿ, ಪ್ರೊಫೆಸರ್ ಸರ್ಕಾರ್‌ರವರಿಗೆ ನೇರವಾಗಿ ಬರೆಯಬಹುದು. ಪತ್ರ ಇಂಗ್ಲೀಷ್ ಭಾಷೆಯಲ್ಲಿರಬೇಕಾದುದು ಅಗತ್ಯ. ಅವರ ಪತ್ತೆ:

ಪ್ರೊಫೆಸರ್ ಪಿ. ಸಿ. ಸರ್ಕಾರ್,
ಮೆಜಿಷಿಯನ್
12/3/A, ಜಮೀರ್ ಲೇನ್, ಬಾಲಿಗಂಜ್
ಕಲಕತ್ತಾ–19

# ಬಣ್ಣದ ಚಿತ್ರ ಕಥೆ - 1

**ಪೂ**ರ್ವದಲ್ಲಿ ಚೀನಾದೇಶದ ಒಂದು ಊರಿನಲ್ಲಿ ಒಬ್ಬ ಬಡ ಹೆಂಗಸಿದ್ದಳು. ಜೀವನ ಸಾಗಿಸಲು ಪೇಟೆ ಬೀದಿಯಲ್ಲಿ ಒಂದು ಸಣ್ಣ ಜಾಗವನ್ನು ಬಾಡಿಗೆಗೆ ಪಡೆದು, ಕೊಡೆಯ ವ್ಯಾಪಾರವನ್ನು ಶುರು ಹಚ್ಚಿದಳು. ಆಕೆಯ ಅಂಗಡಿಯಲ್ಲಿ ವಿಧವಿಧವಾದ ಕೊಡೆಗಳಿದ್ದುವು.

ಆಕೆಗೆ ಒಬ್ಬನೇ ಒಬ್ಬ ಮಗ. ಆತನ ಹೆಸರು ಚಾಂಗ್. ಅಂಗಡಿಯಲ್ಲಿ ಕುಳಿತುಕೊಳ್ಳುವುದೆಂದರೆ ಆತನಿಗೆ ಅತಿ ಬೇಸರ. ಆದರೆ ಮನೆಯಲ್ಲಿ ಎಷ್ಟು ಹೊತ್ತಾದರೂ ಯಾವಾಗಲೂ ಏಕಾಂತದಲ್ಲಿ ಕುಳಿತು ಏನೋ ಆಲೋಚಿಸುತ್ತಿರುವನು. ಕೇವಲ ವ್ಯರ್ಥವಾದ ಆಲೋಚನೆಯಲ್ಲ; ತನ್ನ ತಾಯಿಯ ಕೊಡೆ ವ್ಯಾಪಾರಕ್ಕೆ ಅನುಕೂಲವಾಗುವಂತಹ ಯಾವ ಕೆಲಸ ಮಾಡೋಣವೆಂಬುದೇ ಆತನ ನಿರಂತರ ಆಲೋಚನೆ.

ಚಾಂಗ್ ಕಲಾತ್ಮಕ ದೃಷ್ಟಿಯುಳ್ಳವನು. ಮಣ್ಣಿನಲ್ಲಿ ಬೊಂಬೆ ಮಾಡುವುದು, ಮರದಿಂದ ಬಿದುರಿನಿಂದ ಚೊಕ್ಕವಾಗಿ ವಿಗ್ರಹ ಕೆತ್ತುವುದೆಂದರೆ ಆತನಿಗೆ ಆಟ. ಆತನು ಆ ಕೋಣೆಯಲ್ಲಿ ಕುಳಿತು ಕೊಡೆಗಳಿಗೆ ಅಂದವಾದ ಹಿಡಿಗಳನ್ನು ಮರದಿಂದ ಕೆತ್ತಿ ತಯಾರು ಮಾಡುವನು. ಆ ಹಿಡಿಗಳನ್ನುಳ್ಳ ಕೊಡೆಗಳನ್ನು ಕಂಡವರೆಲ್ಲಾ ಸಂತೋಷಪಟ್ಟು ಬಿಡಲಾರದೆ ಕೊಂಡು ಕೊಂಡು ಹೋಗುತ್ತಿದ್ದರು.

ಚಾಂಗ್ ಹೊಲ ಗದ್ದೆ ಅಡವಿ ಬೆಟ್ಟಗಳಲ್ಲೆಲ್ಲಾ ಸುತ್ತಾಡುವನು. ಕೊಡೆಗಳ ಹಿಡಿಗೆ ಸರಿಯಾಗುವಂತಹ ಒಳ್ಳೆ ಮರವೇನಾದರೂ ಸಿಕ್ಕುವುದೋ ಎಂಬುದೇ ಆತನ ಧೃಷ್ಟಿ.

ಒಂದುಸಲ ಹೀಗೇ ಆತನು ಒಂದು ಅಡವಿಯಲ್ಲಿ ಹೋಗುತ್ತಿರಲು ಒಂದು ವಿಚಿತ್ರ ಆಕರ್ಷಣೀಯ ಮರವು ಕಂಡಿತು. ಚಾಂಗ್ ಅದನ್ನು ಚೆನ್ನಾಗಿ ದೃಷ್ಟಿಸಿದ. 'ಭೇಷ್! ಇದರ ಕೊಂಬೆಗಳು ಒಂದು ವೃದ್ಧನ ಬೊಂಬೆ ತಯಾರಿಸಲು ಬಹಳ ಅಂದವಾಗಿ ಅನುಕೂಲವಾಗಿವೆ' ಎಂದು ಕೊಂಡ. ತನ್ನ ಕಿರುಗತ್ತಿಯಿಂದ ಅದರ ಒಂದು ಕೊಂಬೆಯನ್ನು ಕತ್ತರಿಸಲು ಅನುವಾದ. ಆದರೆ ಆ ಮರ ಸಾಮಾನ್ಯವಾದುದಲ್ಲ, ಅದು ಒಂದು ಮಾಯದಮರವೆಂಬುದು ಆತನಿಗೆ ತಿಳಿಯದು.

ಅನಂತರ ಏನು ನಡೆಯಿತೆಂಬುದನ್ನು ಬರುವತಿಂಗಳು ಚಿತ್ರದೊಂದಿಗೆ ನೋಡಿರಿ.

## ಒಂದು ಸಂಜೆ

ದಿನಕರ ಬಂದನು ದಿಗಂತದಂಚಿಗೆ
ಸಂಜೆ ಯಾಗಿತ್ತು.
ಕಿರಣದ ಕೆಂಪು ಕಾಂತಿಯ ಚಿಗುರನು
ಚುಂಬನ ಮಾಡಿತ್ತು—ಪ್ರೇಮದ
ಹೊನಲೇ ಹರಿದಿತ್ತು

ಬೀಸುವ ಗಾಳಿಗೆ ಹಿಗ್ಗುವ ತಗ್ಗುವ
ಅಲೆಗಳ ನಡೆಯಿತ್ತು
ಮುಳುಗುವ ಸೂರ್ಯನ ನೋಡುವ ಕಮಲಕೆ
ಚಿಂತೆಯು ನೆಲಸಿತ್ತು—ಮೊಗದೊಳು
ಕಾಂತಿಯು ಕುಂದಿತ್ತು

ನಭದಲಿ ಹಾರುವ ಹಕ್ಕಿಯು ಹರುಷದಿ
ಗೂಡನು ಸೇರಿತ್ತು
ಕೋಕಿಲೆ ಕಂಠದ ಕೊಳಲಿನ ನಾದವು
ಇಂಪನು ತಂದಿತ್ತು—ಜೀವನ
ಶಾಂತಿಯು ಹೊಂದಿತ್ತು.

ಪ್ರಣಯಿನಿ ಪ್ರಣಯಿಯ ಹುಡುಕುವ ತೆರದಿ
ಚಂದಿರ ಹೊರಟಿತ್ತು.
ಬಾನೊಳು ರವಿ ಬೆಳ್ದಿಂಗಳ ನಡುವೆ
ತಾರೆಯ ನಗುವಿತ್ತು—ಮೌನದ
ಮೋಹವೆ ಮೂಡಿತ್ತು.

ಕಲೆಯನು ಕಂಡಾ ಕಾವ್ಯದ ಹೃದಯಕೆ
ಸ್ಫೂರ್ತಿಯು ಸಂದಿತ್ತು.
ಸಂಜೆಯ ಸೊಬಗನು ಸವಿಯುವ ರಸಿಕಗೆ
ಕಿರುನಗೆ ಮೂಡಿತ್ತು—ಕಣ್‌ಪನಿ
ಕೆನ್ನೆಯ ಮೂಡಿತ್ತು.

—ಹೆಚ್. ಎಸ್. ಅನಂತ ಕೃಷ್ಣ.

# ಮುಖಚಿತ್ರ

ಧರ್ಮರಾಯನ ರಾಜಸೂಯ ಯಾಗವು ಸಂಪೂರ್ಣವಾಗಿ ನೆರವೇರಿತು. ಕಡೆಗೆ ಸೋಮಾಭಿಷವ ವೆಂಬ ದಿನದಲ್ಲಿ ಅಲ್ಲಿ ನೆರೆದಿದ್ದ ಮಹಾತ್ಮರಿಗೆ ಯೋಗ್ಯತಾನುಸಾರ ಪೂಜೆಸತ್ಕಾರಗಳನ್ನು ಧರ್ಮ ರಾಜನು ನಡೆಸ ತೊಡಗಿದನು. ಮೊದಲು ಯಾರಿಗೆ ಅಗ್ರಪೂಜೆಯನ್ನು ನಡೆಸಬೇಕೆಂಬ ವಿಚಾರದಲ್ಲಿ ಆಪ್ತರ ಅಭಿಪ್ರಾಯದಂತೆ ಶ್ರೀಕೃಷ್ಣನೇ ಅದಕ್ಕೆ ಅರ್ಹನೆಂದು ನಿಶ್ಚಯಿಸಿ, ಕೃಷ್ಣನ ಪಾದಗಳನ್ನು ತೊಳೆದು ತೀರ್ಥವನ್ನು ತಾನೂ ತನ್ನ ತಮ್ಮಂದಿರೂ ದ್ರೌಪದಿಯೂ ಇತರ ಪರಿ ವಾರವೂ ಪ್ರೋಕ್ಷಿಸಿಕೊಂಡರು. ನಂತರ ಅಮೂಲ್ಯ ಪೀತಾಂಬರಾದಿ ಕಾಣಿಕೆಗಳನ್ನು ಕೃಷ್ಣನಿಗೆ ಅರ್ಪಿಸಿ ಸತ್ಕರಿಸಿ ಸಂತೋಷಪಡುತ್ತಿರಲು ಅಲ್ಲಿ ನೆರೆದಿದ್ದ ಸಕಲರೂ ಆನಂದಭರಿತರಾಗಿ ಜಯ ಘೋಷವನ್ನು ಮಾಡಿದರು. ಪುಷ್ಪವೃಷ್ಟಿ ಸುರಿಯಿತು.

ಇದನ್ನೆಲ್ಲಾ ನೋಡುತ್ತಾ ಮನದೊಳಗೆ ಕುದಿಯುತ್ತಿದ್ದ ಜರಾಸಂಧನ ಮಿತ್ರ ಶಿಶುಪಾಲನಿಗೆ ಸಹಿಸಲಾರದ ಸಂಕಟವುಂಟಾಯಿತು. ಕುಳಿತಿದ್ದ ಪೀಠದಿಂದ ದಿಗ್ಗನೆ ಮೇಲೆದ್ದು ಆಡಬಾರದ ನುಡಿ ಗಳಿಂದ ಕೃಷ್ಣನನ್ನು ನಿಂದಿಸಲಾರಂಭಿಸಿದನು. ಕಡೆಗೆ ಅಲ್ಲಿ ನೆರೆದವರ ಕಡೆ ತಿರುಗಿ "ಎಲೈ ಸಭಾ ಸದರೆ, ತಪೋಧನರೂ, ಜ್ಞಾನವೃದ್ಧರೂ, ಬ್ರಹ್ಮನಿಷ್ಠರಾದ ಮಹಾಮಹಿಮರೂ, ಋಷಿವರ್ಯರೂ, ನೆರೆದಿರುವ ಈ ಸಭೆಯಲ್ಲಿ ಅಂತಹವರನ್ನೆಲ್ಲಾ ಅಲಕ್ಷಿಸಿ ಕೇವಲ ಚಿಕ್ಕವನೂ ಕುಲ ಹೀನನೂ ಆದ ಈ ಗೊಲ್ಲನಿಗೆ ಅಗ್ರಪೂಜೆ ನಡೆಸುವುದು ಯೋಗ್ಯವೆ? ಏಕೆ ಸುಮ್ಮನಿರುವಿರಿ?" ಎಂದು ಕೂಗಾಡುತ್ತಿರಲು ನೆರೆದ ಸಜ್ಜನರೆಲ್ಲರೂ ಈ ನಿಂದೆ ಕೇಳಲಾರದೆ ಎದ್ದು ಹೊರಡಲಾರಂಭಿಸಿದರು. ಪಾಂಡವ, ಮತ್ಸ್ಯ, ಕೇಕಯ, ಸೃಂಜಯ ಮುಂತಾದವರು ಕತ್ತಿಹಿರಿದು ಶಿಶುಪಾಲನನ್ನು ಸಂಹರಿಸಲು ಮೇಲೆದ್ದರು. ಶಿಶುಪಾಲನೂ ಎಲ್ಲರನ್ನೂ ಎದುರಿಸುತ್ತಾ ಕತ್ತಿ ಹಿರಿದು ರೋಷಾವಿಷ್ಟ ನಾಗಿ ನಿಂತನು. ಆಗ ಈ ಕೋಲಾಹಲವನ್ನೆಲ್ಲಾ ಶಾಂತತೆಯಿಂದ ಗಮನಿಸುತ್ತಿದ್ದ ಭಗವಂತನಾದ ಶ್ರೀಕೃಷ್ಣನು ಮೇಲೆದ್ದು ರಾಜರುಗಳನ್ನು ತಡೆದು ಶ್ರೀಸುದರ್ಶನ ಚಕ್ರವನ್ನು ಶಿಶುಪಾಲನ ಮೇಲೆ ಪ್ರಯೋಗಿಸಿದನು. ಆ ದಿವ್ಯಾಯುಧವು ಸೂರ್ಯನಂತೆ ಜ್ವಲಿಸುತ್ತಾ ಶಿಶುಪಾಲನ ತಲೆಯನ್ನು ಕತ್ತರಿಸಿ ಮಾಯವಾಯಿತು. ಶಿಶುಪಾಲನ ದೇಹದಿಂದ ದಿವ್ಯತೇಜಸ್ಸೊಂದು ಎದ್ದು ಶ್ರೀಕೃಷ್ಣನ ದೇಹದೊಡನೆ ಐಕ್ಯವಾಯಿತು.

ನಂತರ ಶಾಂತಿ ಸಂಭ್ರಮಗಳಿಂದ ಯಾಗ ಕೊನೆಗೊಂಡು ಸಕಲರೂ ತೃಪ್ತರಾಗಿ ಹಿಂತೆರಳಿದರು.

## " ಅಪ್ಪಚ್ಚಿ "

ಅಪ್ಪ ಕೊಪ್ಪಕ್ಕೆ ಹೋಗಿ,
ತಪ್ಪಲೇ ತುಂಬ ತುಪ್ಪವಾ ಕೊಂಡು,
ಕೈ ತಪ್ಪಿ ಬೀಳದಂತೆ,
ತೊಪ್ಪೆಯಾ ಹಗ್ಗವನು,
ತಪ್ಪದೇ ಒಪ್ಪವಾಗಿ ತಪ್ಪಲೆಗೆ ಬಿಗಿದು;
ತಾಂಬೂಲ ತುಪ್ಪುತ್ತಾ,
ಕೊಪ್ಪದಿಂದ ಬರುವಾಗ;
ಕಪ್ಪೆ ಕುಪ್ಪಳಿಸಿ,
ದೊಪ್ಪನೆ ಜಾರಿಬಿದ್ದು,
ಸಪ್ಪೆಯಾ ಮುಖದಿಂದ,
ತಪ್ಪಲೇ ಹಿಡಿದುಕೊಂಡು,
" ಅಪ್ಪಪ್ಪಾ "!! ಎನ್ನುತ್ತಲೇ,
ಚಪ್ಪರಿಸಿ ಕೊಂಡು,
ಕೊಪ್ಪದಿಂದಲೇ ನಡೆದು,
ಸೊಪ್ಪಾಗಿ ಸೋತು ಬಂದು,
ಅಪ್ಪಟಾ ತುಪ್ಪದಲಿ,
" ಅಪ್ಪಕಜ್ಜಾಯವ " ಕರಿದು,
ಅಪ್ಪಿಯಾ ಮಗನಿಗೆ,
ಕುಪ್ಪಿಗೆ ತುಂಬಾ,
" ಅಪ್ಪಚ್ಚಿ " ಕೊಟ್ಟನು.

—ಕೆ. ಸಾಂಬಶಿವನ್,

---

### ಚುಟಿಕ

ರಾಮನೊಬ್ಬ ಕೇಡಿ
ಸೇದುತಿದ್ದ ಬೀಡಿ
ಬೀಡಿಗಾಗಿ
ಹಣವ ಕದ್ದ
ಕೈಗೆ ಬಿತ್ತು ಬೇಡಿ.

—ಗೋಪಾಲ.

## ಒಂದೇ ಗೆರೆಯ ಚಿತ್ರ



ಕಳಿಸಿದವರು:
ಟಿ. ವಿ. ರಂಗಸ್ವಾಮಿ, ಆರಣಿ.



ಕಳಿಸಿದವರು:
ಕೆ. ಬಿ. ಕುಲಕರ್ಣಿ, ಬಾಗಲಕೋಟೆ.

ಬರುತ್ತದೆ!



ವಿಜಯ ರವರ,...

# ಮದುವೆ ಮಾಡಿ ನೋಡು

ನಿರ್ಮಾಪಕರು

ನಾಗಿರೆಡ್ಡಿ - ಚಕ್ರಪಾಣಿ

ಡೈರೆಕ್ಷನ್

ಪ್ರಸಾದ್

Controlling Editor : SRI CHAKRAPANI
Printed and Published by B. NAGI REDDI at the B. N. K. Press Ltd., Madras



Chandamama, January '52 Photo by Pranlal K. Patel

